


# ವಿಜಯನಗರದ ವಾಸ್ತುಶಿಲ್ಪ

ಡಾ. ಬಾ. ರಾ. ಗೋಪಾಲ್




ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ
ನೃಪತುಂಗ ರಸ್ತೆ
ಬೆಂಗಳೂರು-೫೬೦ ೦೦೨

ಡಾ. ಬಾ. ರಾ. ಗೋಪಾಲ್ ಅವರಿಂದ ರಚಿಸಲ್ಪಟ್ಟ 'ವಿಜಯನಗರದ ವಾಸ್ತು ಶಿಲ್ಪ' ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದವರಿಂದ ಪ್ರಥಮ ವಿಶ್ವ ಕನ್ನಡ ಸಮ್ಮೇಳನದ ಸಂದರ್ಭದಲ್ಲಿ (ಜನವರಿ ೧೯೮೩) ಐಬಿಎಚ್ ಪ್ರಕಾಶನ ದವರ ಕೃಪೆಯಿಂದ ಪ್ರಕಟಿಸಲ್ಪಟ್ಟಿದ್ದು.

VIJAYANAGARADA VASTUSHILPA—a monograph on the Architecture of Vijayanagara written in Kannada by Dr. B. R. Gopal. Published by The Directorate of Kannada and Culture, Government of Karnataka, 14/3A Nrupathunga Road, Bangalore-560 002, on the occasion of the *FIRST WORLD KANNADA CONFERENCE (January 1983)* by the Courtesy of IBH Prakashana, Gandhinagar, Bangalore-560 009



ಬೆಲೆ ರೂ. ೨-೦೦

ಮುಖಪುಟ : ಮನೋಹರ್

ಛಾಯಾಚಿತ್ರಗಳು : ಆರ್ಕಿಯಾಲಾಜಿಕಲ್ ಸರ್ವೇ ಆಫ್ ಇಂಡಿಯ, ಮದ್ರಾಸ್
ಮತ್ತು ಬಿ. ಕೇಸರ್ ಸಿಂಗ್

ಮುದ್ರಕರು : ಎಚ್. ಎಸ್. ಎನ್. ರಾವ್ ಐಬಿಎಚ್ ಪ್ರಕಾಶನ ಪ್ರಿಂಟರಿ,
ಬೆಂಗಳೂರು-೫೬೦ ೦೦೯

# ೧

ಭಾರತದ ಇತಿಹಾಸದಲ್ಲಿ ವಿಜಯನಗರದ ಇತಿಹಾಸಕ್ಕೆ ಪ್ರಮುಖವಾದ ಸ್ಥಾನವಿವೆ. ೧೩-೧೪ನೇ ಶತಮಾನಗಳಲ್ಲಿ ಉತ್ತರ ಭಾರತ ಮಹಮದೀಯರ ದಾಳಿಗೆ ಸಿಲುಕಿತು. ಆ ಮೊದಲು ಅಲ್ಲಿ ಆಳುತ್ತಿದ್ದ ಹಿಂದೂ ಅರಸರ ಮನೆತನಗಳು ಒಂದೊಂದಾಗಿ ಮಹಮದೀಯರ ವಶವಾದುವು. ಗುಲಾಮೀ ಸಂತತಿ ಎಂದು ಹೆಸರು ಪಡೆದ ಮನೆತನಕ್ಕೆ ಸೇರಿದ ಕುತ್ಬುದ್ದೀನ್ ಐಬಕನು ದೆಹಲಿಯಲ್ಲಿ ಮಹಮದೀಯ ರಾಜ್ಯವನ್ನು ಸ್ಥಾಪಿಸಿದಂದಿನಿಂದ ಅಲಾಉದೀನ್ ಖಿಲ್ಜಿಯವರೆಗೆ, ಒಂದೊಂದೇ ಹಿಂದೂ ರಾಜ್ಯ ಕಣ್ಮರೆಯಾಗತೊಡಗಿತು. ಅಲಾಉದೀನನು ಮೊದಲ ಬಾರಿ ದಕ್ಷಿಣ ಭಾರತದ ಮೇಲೆ ದಂಡೆತ್ತಿ ಬಂದ. ಆಗ ಅಲ್ಲಿ ಆಳುತ್ತಿದ್ದ ಸೇಉಣ, ಕಾಕತೀಯ, ಹೊಯ್ಸಳ, ಪಾಂಡ್ಯ ಅರಸರ ಮನೆತನಗಳ ಅರಸರು ಅಲ್ಲಾಉದೀನನ ದಂಡಯಾತ್ರೆಗೆ ಹೆಚ್ಚಿನ ಮಹತ್ವವನ್ನೇ ಕೊಡದೆ ಪರಸ್ಪರ ಕಾದಾಟಗಳಲ್ಲಿ ತೊಡಗಿದ್ದರು. ಅಲಾಉದೀನನಿಗೆ ದಕ್ಷಿಣದ ಈ ರಾಜ್ಯಗಳನ್ನು ಕಬಳಿಸಿ ಇಲ್ಲಿ ಸ್ವತಃ ತನ್ನ ಪ್ರಭುತ್ವವನ್ನು ಸ್ಥಾಪಿಸುವ ಆಸೆ ಇರಲಿಲ್ಲ. ಅದರಿಂದ ಹೆಚ್ಚಿನ ಜವಾಬ್ದಾರಿಯನ್ನು ವಹಿಸುವಂತಾಗುತ್ತದೆಂಬುದು ಆತನ ಹಿಂಜರಿತನಕ್ಕೆ ಕಾರಣ. ಆದರೆ ದಕ್ಷಿಣದ ಅಪಾರ ಸಂಪತ್ತಿನ ಖ್ಯಾತಿಯನ್ನು ಕೇಳಿದ್ದ ಆತನಿಗೆ ಅಲ್ಲಿನ ಸಂಪತ್ತು ಮಾತ್ರ ವಿಶೇಷ ಆಕರ್ಷಣೆಯಾಗಿತ್ತು. ಎಂತಲೇ ಸುಲ್ತಾನನಾಗುವ ಮೊದಲೇ ಆತ ದಕ್ಷಿಣದ ಕಡೆ ಸೈನ್ಯದೊಡನೆ ಬಂದ. ಸೇಉಣರ ರಾಜಧಾನಿಯಾದ ದೇವಗಿರಿಯನ್ನು ೧೨೯೪ ರಲ್ಲಿ ಮುತ್ತಿ ಅಲ್ಲಿನ ಸಂಪತ್ತನ್ನು ಸಾಗಿಸಿದ. ೧೨೯೬ ರಲ್ಲಿ ದೆಹಲಿಯ ಸುಲ್ತಾನನಾದ ಬಳಿಕ ತನ್ನ ದಂಡನಾಯಕನಾದ ಮಲಿಕ್ ಕಾಫರನನ್ನು ೧೩೦೭ರಲ್ಲಿ ಮತ್ತೊಮ್ಮೆ ದಕ್ಷಿಣಕ್ಕೆ ಕಳುಹಿಸಿದ. ೧೩೦೯ರಲ್ಲಿ ಮೂರನೇ ಬಾರಿ ದಕ್ಷಿಣಕ್ಕೆ ಬಂದ ಅಲಾಉದೀನನ ಸೈನ್ಯ ವಾರಂಗಲ್ಲನ್ನು ಮುತ್ತಿತು.

ಸೇಉಣ ರಾಮಚಂದ್ರ ಈ ಬಾರಿ ಮಹಮದೀಯರಿಗೆ ನೆರವು ನೀಡಬೇಕಾಯಿತು. ಅನಂತರದ ಸರದಿ ದೋರಸಮುದ್ರದ ಹೊಯ್ಸಳರದು. ಮುಮ್ಮಡಿ ಬಲ್ಲಾಳ ೧೩೧೧ರಲ್ಲಿ ಸೋಲಿಸಲ್ಪಟ್ಟ. ಕೆಲವೇ ವರ್ಷಗಳಲ್ಲಿ ಸೇಉಣರ ರಾಜ್ಯ ಅಳಿದು, ಅಲ್ಲಿ ಒಬ್ಬ ಮಹಮದೀಯ ಪ್ರಾಂತಾಧಿಕಾರಿ ಸುಲ್ತಾನನ ಅಧೀನದಲ್ಲಿ ಆಳತೊಡಗಿದ. ೧೩೨೩ರಲ್ಲಿ ವಾರಂಗಲ್ಲು ಸಹ ಮಹಮದೀಯರ ವಶವಾಯಿತು. ದಕ್ಷಿಣದ ಮಧುರೆಯಲ್ಲಿ ಆಳುತ್ತಿದ್ದ ಪಾಂಡ್ಯರು ಸಹ ರಾಜ್ಯ ಭ್ರಷ್ಟರಾಗಿ ಅಲ್ಲಿ ಒಬ್ಬ ಸುಲ್ತಾನನ ಆಳಿಕೆ ಆರಂಭವಾಯಿತು. ರಾಯಚೂರಿನ ಕಂಪಿಲಿಯಲ್ಲಿ ಆಳುತ್ತಿದ್ದ ಸಣ್ಣ ಸಾಮಂತ ಮನೆತನ ಸಹ ೧೩೨೭ರಲ್ಲಿ ಕಣ್ಮರೆಯಾಯಿತು.

ಖಿಲ್ಜಿ ಸಂತತಿಯ ನಂತರ ದೆಹಲಿಯಲ್ಲಿ ಅಧಿಕಾರಕ್ಕೆ ಬಂದ ತುಘಲಕ್ ಮನೆತನದ ಮಹಮ್ಮದನು ಅನುಸರಿಸಿದ ರಾಜ್ಯ ವಿಸ್ತರಣೆಯ ನೀತಿ ಇದಕ್ಕೆ ಪ್ರಮುಖ ಕಾರಣ. ಸಮಗ್ರ ಭಾರತವನ್ನೇ ಆಳುವ ಕನಸು ಕಂಡ ಆ ಸುಲ್ತಾನ ಈ ರಾಜ್ಯಗಳನ್ನು ಬದಿಗೊತ್ತಿ ಇಲ್ಲಿ ತನ್ನ ಅಧಿಕಾರಿಗಳನ್ನು ಪ್ರಾಂತಾಧಿಕಾರಿಗಳಾಗಿ ನೇಮಿಸಿದ. ತನ್ನ ಈ ಕನಸನ್ನು ನನಸಾಗಿಸಿಕೊಳ್ಳುವ ಅವಕಾಶವೂ ಆತನಿಗಿತ್ತು. ಆದರೆ ದಕ್ಷಿಣದಲ್ಲಿ ಇನ್ನೂ ಉಸಿರಾಡುತ್ತಿದ್ದ ಒಂದೇ ಮನೆತನ ಹೊಯ್ಸಳರದು. ಅಶಕ್ತನಾಗಿದ್ದರೂ ಹೊಯ್ಸಳರ ಅರಸ ಮುಮ್ಮಡಿ ಬಲ್ಲಾಳ ನಾಡನ್ನು ಪರದೇಶೀಯರಿಂದ ರಕ್ಷಿಸಿಕೊಳ್ಳಲು ಬಹಳಷ್ಟು ಶ್ರಮಿಸಿದ. ಆತನು ಸಾಯುವ ವೇಳೆಗೆ ವಿಜಯನಗರ ಸಾಮ್ರಾಜ್ಯ ಉದಯಿಸಿತ್ತು. ತನ್ನ ಜೀವನ ಸಾರ್ಥಕವಾಯಿತೆನ್ನುವ ತೃಪ್ತಿಯಿಂದ ಆತ ಕೊನೆಯುಸಿರೆಳೆದ.

ಮಹಮದೀಯರ ದಾಳಿಗಳ ಮಹತ್ವವನ್ನು ಆರಂಭದಲ್ಲಿ ಅರಿಯಲಾರದೆ ಹೋದ ಹಿಂದೂ ಅರಸರು ಮೊದಲಿನಿಂದ ಉದಾಸೀನರಾಗಿದ್ದು ಸ್ವಾರ್ಥಿಗಳಾಗಿ ಪರಸ್ಪರ ಕಾದಾಡಿದರು. ನೈಜ ಪರಿಸ್ಥಿತಿಯನ್ನು ಅರಿಯುವುದರೊಳಗಾಗಿ ದಿಗ್ಭ್ರಾಂತರಾಗಿ, ಅಶಕ್ತರಾಗಿ ಅಳಿದರು. ಉಳಿದೊಬ್ಬ ಮುಮ್ಮಡಿ ಬಲ್ಲಾಳ ವಾಸ್ತವಿಕ ಪರಿಸ್ಥಿತಿಗಳನ್ನು ಮನಗಂಡಾಗ ಸ್ವದೇಶ ರಕ್ಷಣೆಗಾಗಿ ಮುಂಜಾಗರೂಕತೆಯ ಕ್ರಮಗಳನ್ನು ತಡವಾಗಿಯಾದರೂ ಕೈಗೊಂಡ. ತುಂಗಭದ್ರೆಯ ತೀರದ ಉತ್ತರದಲ್ಲಿ ಹೊಸದುರ್ಗ (ವಿರೂಪಾಕ್ಷ ಹೊಸದುರ್ಗ: ಹೊಸಬೆಟ್ಟ; ಹೊಸಪಟ್ಟಣ)ವೆಂಬ ಬಲವಾದ ಕೋಟೆಯನ್ನು ಕಟ್ಟಿ ಸುಮಾರು ಹತ್ತು ವರ್ಷಗಳ ಕಾಲ, ೧೩೩೦ ರಿಂದ ೧೩೪೦ರವರೆಗೆ, ಸ್ವತಃ ಅಲ್ಲಿ ನೆಲಸಿದ. ಆಡಳಿತವನ್ನು ವಿಕೇಂದ್ರೀಕರಣಮಾಡಿ, ಅಧಿಕಾರಿಗಳಿಗೆ, ಸಂಬಂಧಿಕರಿಗೆ ಹೆಚ್ಚಿನ

ಸಮಾನ ಅಧಿಕಾರವನ್ನು ನೀಡಿದ. ಮುಳುಗುತ್ತಿದ್ದ ನಾವೆಯನ್ನು ರಕ್ಷಿಸಲು ಇದೊಂದೇ ಆತನಿಗಿದ್ದ ಮಾರ್ಗ.

ಆತನಿಂದ ಅಧಿಕಾರ ಪಡೆದು, ಆತನಿಗೆ ನೆರವು ನೀಡಿದವರಲ್ಲಿ ಹರಿಯಪ್ಪವೊಡೆಯ–ಹರಿಹರ–ಒಬ್ಬ. ಈತನು ತನ್ನ ಸೋದರರಾದ ಬುಕ್ಕ, ಕಂಪಣ್ಣ, ಮಾರಪ್ಪ ಮತ್ತು ಮುದ್ದಪ್ಪರೊಡಗೂಡಿ ನಾಡಿನ ರಕ್ಷಣೆಯ ಹೊಣೆ ಹೊತ್ತ. ಮಹಾಮಂಡಲೇಶ್ವರ ಎನಿಸಿಕೊಂಡಿದ್ದ ಈತ ಕ್ರಮೇಣ ಪ್ರಬಲನಾದ. ೧೩೩೬ ರಿಂದ ಅಧಿರಾಜನಾಗಿದ್ದರೂ ಸ್ವತಂತ್ರವಾಗಿ ಕಾರ್ಯಗಳನ್ನು ನಿಯೋಜಿಸತೊಡಗಿ, ನಂತರದ ಒಂದು ದಶಕದ ಒಳಗೆ ಸ್ವತಂತ್ರವಾದ ರಾಜ್ಯವನ್ನು ಕಟ್ಟಿದ.

ಹೀಗೆ ಸ್ಥಾಪಿತವಾದ ವಿಜಯನಗರ ರಾಜ್ಯ ಮುಂದೆ ದಕ್ಷಿಣ ಭಾರತದಲ್ಲೆಲ್ಲ ವಿಸ್ತರಿಸಿ ಸಾಮ್ರಾಜ್ಯವೆನಿಸಿಕೊಂಡಿತು. ೧೩೪೬ ರಲ್ಲಿ ಹರಿಹರನು ತನ್ನ ಸೋದರರೊಡಗೂಡಿ ಶೃಂಗೇರಿಗೆ ಹೋಗಿ ಅಲ್ಲಿ ರಾಜ್ಯೋತ್ಸವವನ್ನು ಆಚರಿಸಿದ ಸಂದರ್ಭದಲ್ಲಿ ಗುರುಗಳಾದ ಭಾರತೀತೀರ್ಥ ಶ್ರೀಪಾದಂಗಳವರಿಗೆ ದತ್ತಿಗಳನ್ನು ಸಲ್ಲಿಸಿದ. ಹೀಗೆ ಆರಂಭವಾದ ರಾಜ್ಯ ಕೆಲವು ಖಚಿತವಾದ ಉದ್ದಿಶ್ಯಗಳನ್ನು ಹೊಂದಿತ್ತು. ಪರರಾಜ್ಯ, ಪರಧರ್ಮ, ಪರಸಂಸ್ಕೃತಿಗಳು ಸ್ವರಾಜ್ಯ, ಸ್ವಧರ್ಮ, ಸ್ವಸಂಸ್ಕೃತಿಗಳಿಗೆ ಗಂಡಾಂತರವನ್ನುಂಟುಮಾಡಿದ ಸಂದರ್ಭದಲ್ಲಿ ಸ್ವಶಕ್ತಿಯನ್ನು ಸಂವರ್ಧಿಸಿ ಹಿಂದೂಧರ್ಮವನ್ನು, ಭಾರತೀಯ ಸಂಸ್ಕೃತಿಯನ್ನು ಪುನರುಜ್ಜೀವನಗೊಳಿಸುವುದು ಈ ನವೋದಯ ರಾಜ್ಯದ ವಿಶಿಷ್ಟ ಧ್ಯೇಯವಾಗಿದ್ದಿತು. ಇದಕ್ಕಾಗಿ ಎಲ್ಲ ಧರ್ಮಗಳನ್ನೂ ಪೋಷಿಸುವ



ವಿಜಯನಗರದ ವರಾಹಲಾಂಛನ

ಪರಂಪರಾಗತವಾದ ವಿದ್ಯೆ–ಜ್ಞಾನ ಶಾಖೆಗಳನ್ನು ಊರ್ಜಿತಗೊಳಿಸುವ, ಸ್ವಭಾಷೆ–ಸಾಹಿತ್ಯ–ಕಲೆಗಳಿಗೆ ಪ್ರೋತ್ಸಾಹ ನೀಡುವ ಅಭಿಲಾಷೆಯನ್ನು ಈ ಸಾಮ್ರಾಜ್ಯದ ಅರಸರು ಹೊಂದಿದ್ದರು.

ಸುಮಾರು ೨೨೦ ವರ್ಷಗಳು ಭವ್ಯವಾಗಿ ಬಾಳಿದ ಈ ಸಾಮ್ರಾಜ್ಯದಲ್ಲಿ ಮೂರು ಮನೆತನಗಳ ಅರಸರು ಆಳಿದರು. ಸಾಮ್ರಾಜ್ಯವನ್ನು ಸ್ಥಾಪಿಸಿದ ಸೋದರರು ಸಂಗಮ ಪುತ್ರರು. ಇವರ ಮನೆತನಕ್ಕೆ ಆ ಮೂಲಪುರುಷನ ಹೆಸರನ್ನೇ ಇಡಲಾಗಿದೆ. ಸಂಗಮನ ಹಿರಿಯ ಮಗನಾದ ಹರಿಹರನಿಗೆ ಆತನ ಸೋದರರು ಬೆಂಬಲವಾಗಿ ನಿಂತರು. ಬುಕ್ಕರಾಯನು ಯುವರಾಜನೆನಿಸಿ ಹರಿಹರನ ಜೊತೆಯಲ್ಲಿದ್ದನು. ಕಂಪಣ್ಣನು ಆಂಧ್ರಪ್ರದೇಶದ ನೆಲ್ಲೂರು, ಕಡಪಾ ಜಿಲ್ಲೆಗಳನ್ನೊಳಗೊಂಡ ಉದಯಗಿರಿ ರಾಜ್ಯದ ಒಡೆಯನಾಗಿದ್ದನು. ಇನ್ನೊಬ್ಬ ಸೋದರನಾದ ಮಾರಪ್ಪನು ಪಶ್ಚಿಮದಲ್ಲಿ ಆರಗ (ಮಲೆ) ರಾಜ್ಯದ ಅಧಿಕಾರಿಯಾಗಿದ್ದನು.

ಹರಿಹರನ ನಂತರ ಸೋದರನಾದ ಬುಕ್ಕನು ಪಟ್ಟಕ್ಕೆ ಬಂದನು. ವಿಜಯನಗರ ರಾಜ್ಯ ಸ್ಥಾಪನೆಯಾದ ಹತ್ತು ವರ್ಷಗಳ ನಂತರ ಗುಲ್ಬರ್ಗದಲ್ಲಿ ಬಹಮನಿ ಸುಲ್ತಾನರ ರಾಜ್ಯವೂ ಅಸ್ತಿತ್ವಕ್ಕೆ ಬಂದಿತು. ಈ ರಾಜ್ಯದ ಅರಸರು ವಿಜಯನಗರದ ಅರಸರನ್ನು ಶತ್ರುಗಳೆಂದು ಬಗೆದರು. ಈ ಎರಡೂ ರಾಜ್ಯಗಳ ನಡುವೆ ಇದ್ದ ಫಲವತ್ತಾದ ಕೃಷ್ಣಾ–ತುಂಗಭದ್ರ ಬಯಲು ಪ್ರದೇಶವನ್ನು ಆಕ್ರಮಿಸಲು ಸತತವಾದ ಹೋರಾಟಗಳು ಆರಂಭವಾದವು. ಬಹುಮನಿಗಳಿಗಂತೂ ಈ ಹಿಂದೂ ರಾಜ್ಯದೊಡನೆ ಕಾದಾಡಲು ಇದೊಂದು ನೆಪವಾಯಿತು. ಜಯಶ್ರೀ ಯಾರ ಕಡೆಗೂ ಸ್ಥಿರವಾಗಿ ಒಲಿಯಲಿಲ್ಲ. ಬುಕ್ಕನ ಸೋದರನಾದ ಕಂಪಣ್ಣನು ಬಹಳ ಶ್ರಮದಿಂದ ದಕ್ಷಿಣದ ಮಧುರೆಯಲ್ಲಿ ಆಳುತ್ತಿದ್ದ ಸುಲ್ತಾನನನ್ನು ಸೋಲಿಸಿ ಅಲ್ಲಿನ ಮಹಮದೀಯರ ಆಳ್ವಿಕೆ ಕೊನೆಗಾಣುವಂತೆ ಮಾಡಿದನು. ರಾಜಕೀಯವಾಗಿ ಕ್ಲಿಷ್ಟ ಪರಿಸ್ಥಿತಿಗಳೇರ್ಪಟ್ಟಿದ್ದಾಗ ನಾಡಿನ ಜನ ತಮ್ಮ ತಮ್ಮಲ್ಲೇ ಜಾತಿ–ಮತ–ಧರ್ಮಗಳ ನೆಪದಲ್ಲಿ ಕಚ್ಚಾಡುವುದು ವಿಹಿತವಲ್ಲವೆಂದು ಭಾವಿಸಿದ ಅರಸ ಒಮ್ಮೆ ಜೈನರಿಗೂ ಶ್ರೀವೈಷ್ಣವರಿಗೂ ನಡುವಣ ವಿರಸವನ್ನು ಸಮರಸದಿಂದ ಕೊನೆಗಾಣಿಸಿದ. ಹಾಳಾಗಿದ್ದ ದೇವಾಲಯಗಳನ್ನು ಊರ್ಜಿತಗೊಳಿಸಿದ. ವೈದಿಕಧರ್ಮ ರಕ್ಷಣೆಗಾಗಿ ವೇದಗಳಿಗೆ ಭಾಷ್ಯವನ್ನು ರಚಿಸುವಂತೆ ಸಾಯಣಾಚಾರ್ಯ, ಮಾಧವಾಚಾರ್ಯರಿಗೆ ಪ್ರೇರಣೆಯಿತ್ತ. ಆ ಕಾರ್ಯ ಇಪ್ಪತ್ತು ವರ್ಷಗಳನಂತರ, ಇಮ್ಮಡಿ ಹರಿಹರನ

ಕಾಲದಲ್ಲಿ ಮುಕ್ತಾಯಗೊಂಡಿತು. ಅದರ ಕುರುಹಾಗಿ ಹರಿಹರನಿಗೆ ವೇದ ಮಾರ್ಗಸ್ಥಾಪನಾಚಾರ್ಯ ಎಂದು ಬಿರುದು ಸಹ ಸಂದಿತು.

೧೪೨೪ ರಿಂದ ೧೪೪೬ರವರೆಗೆ ಆಳಿದ ದೇವರಾಯ ಸಂಗಮ ಮನೆತನದ ಇನ್ನೊಬ್ಬ ಖ್ಯಾತ ಅರಸ. ಪ್ರೌಢ ಅಥವಾ ಪ್ರತಾಪ ದೇವರಾಯನೆಂದೂ ಕರೆಯಲ್ಪಟ್ಟ ಈತನಿಗೆ ಗಜಬೇಂಟೆಕಾರನೆಂಬ ವಿಶಿಷ್ಟವಾದ ಬಿರುದಿದ್ದಿತು. ಈತನೂ ತನ್ನ ಪೂರ್ವಜರಂತೆ ಬಹಮನಿ ಸುಲ್ತಾನರೊಡನೆ ಸೆಣಸಬೇಕಾಯಿತು. ಈ ಸಂದರ್ಭದಲ್ಲಿ ಶತ್ರುವಿನ ದಾಳಿಯಿಂದ ರಕ್ಷಣೆ ಪಡೆಯಲು ಬಹಮನಿಯ ಸುಲ್ತಾನನು ರಾಜಧಾನಿಯನ್ನು ಗುಲ್ಬರ್ಗದಿಂದ ಹೆಚ್ಚು ಸುರಕ್ಷಿತವಾದ ಬೀದರಿಗೆ ಬದಲಾಯಿಸಿದ. ದೇವರಾಯನ ನೌಕಾಬಲ ಸಿಲೋನ್ (ಶ್ರೀಲಂಕ)ದ್ವೀಪವನ್ನೂ ಮುತ್ತಿತು. ಕಳಿಂಗ ಅರಸ ಕಪಿಲೇಂದ್ರ ಗಜಪತಿ ಸಹ ದೇವರಾಯನಿಂದ ಸೋಲಿಸಲ್ಪಟ್ಟ. ಶ್ರೀಲಂಕ, ಪೆಗು, ಬರ್ಮ ದೇಶಗಳ ಅರಸರು ದೇವರಾಯನಿಗೆ ಕಪ್ಪಕಾಣಿಕೆ ಸಲ್ಲಿಸುತ್ತಿದ್ದರೆಂದು ನ್ಯೂನಿಜ್ ಹೇಳಿದ್ದಾನೆ. ಇಟಲಿಯಿಂದ ನಿಕೊಲೊ ಕೊಂಟಿ ಹಾಗೂ ಪರ್ಷಿಯದಿಂದ ಅಬ್ದುಲ್‌ರಜಾಕ್ ವಿಜಯನಗರಕ್ಕೆ ಬಂದಿದ್ದು ಇಲ್ಲಿನ ವೈಭವವನ್ನು ಕಣ್ಣಾರೆ ಕಂಡು ಬರೆದಿಟ್ಟಿದ್ದಾರೆ.

೧೪೮೫ರಿಂದ ವಿಜಯನಗರದಲ್ಲಿ ಸಾಳುವ ಮನೆತನದ ಅರಸರು ಆಳತೊಡಗಿದರು. ಸಾಳುವ ನರಸಿಂಹ ಸಂಗಮ ಮನೆತನದ ಅರಸರ ಹಿತಚಿಂತಕನಾಗಿದ್ದ. ಆದರೆ ಆ ಮನೆತನದ ಅರಸನಾದ ವಿರೂಪಾಕ್ಷ ಬಲಹೀನನಾಗಿದ್ದು ಕೊಲ್ಲಲ್ಪಟ್ಟ. ನಂತರ ಬಂದ ಪ್ರೌಢದೇವರಾಯ ರಾಜನಾಗಲು ಅರ್ಹನಾಗಿರಲಿಲ್ಲ. ರಾಜ್ಯದ ಹಿತದ ದೃಷ್ಟಿಯಿಂದ ನರಸಿಂಹ ಅವನನ್ನು ಬದಿಗೆ ಸರಿಸಿ, ಸ್ವತಃ ಆಳಲಾರಂಭಿಸಿದ. ಆದರೆ ೬ ವರ್ಷಗಳ ನಂತರ ೧೪೯೧ ರಲ್ಲಿ ಈತ ಮರಣಹೊಂದಿದ. ಈತನ ಅಲ್ಪವಯಸ್ಕರಾದ ಮಕ್ಕಳ ಪ್ರತಿನಿಧಿಯಾಗಿ ತುಳುವ ಮನೆತನದ ನರಸನಾಯಕ ಅಧಿಕಾರ ಸೂತ್ರವಹಿಸಿದ. ನರಸನಾಯಕ ನಿಧನ ಹೊಂದಿದ ಬಳಿಕ ಆತನ ಮಗ ವೀರನರಸಿಂಹ ಅಧಿಕಾರಕ್ಕೆ ಬಂದರೂ ಸಾಳುವ ಇಮ್ಮಡಿ ನರಸಿಂಹನನ್ನು ಸೆರೆಯಲ್ಲಿಟ್ಟು ತಾನೇ ಸ್ವತಂತ್ರವಾಗಿ ಆಳತೊಡಗಿದ.

ವೀರನರಸಿಂಹನ ಮಲಸೋದರ ವಿಜಯನಗರದ ಅತಿ ಶ್ರೇಷ್ಠ ಅರಸನಾದ ಕೃಷ್ಣದೇವರಾಯನು ಆಂತರಿಕ ಕಲಹಗಳಿಂದ ಸತ್ವಹೀನವಾಗಿದ್ದ ರಾಜ್ಯವನ್ನು ಬಲಗೊಳಿಸಿದ. ಚತುರ ಸೇನಾನಿಯಾದ ಈತ ದಕ್ಷತೆಯಿಂದ ಗಜಪತಿಯ ವಿರುದ್ಧ ದಂಡಯಾತ್ರೆಯನ್ನು ಯೋಜಿಸಿ ಅದರಂತೆ ಕಾರ್ಯೋನ್ಮುಖನಾದ.

ನಿರೀಕ್ಷಿಸಿದಂತೆ ಯಶಸ್ಸನ್ನೂ ಪಡೆದ. ಗಜಪತಿಯ ಅರಸನನ್ನು ದಮನಗೊಳಿಸಿದ. ಬಹಮನಿಯ ಸುಲ್ತಾನರನ್ನು ಸಹ ಸೋಲಿಸಿದ. ಪಶ್ಚಿಮತೀರಪ್ರದೇಶದಲ್ಲಿ ವ್ಯಾಪಾರದಲ್ಲಿ ನಿರತರಾಗಿದ್ದ ಪೋರ್ಚುಗೀಸರ ಸ್ನೇಹ ಸಂಪಾದಿಸಿ, ತನ್ಮೂಲಕ ತನ್ನ ರಾಜ್ಯದ ವಾಣಿಜ್ಯ, ವ್ಯವಹಾರಗಳು ಅಭಿವೃದ್ಧಿಗೊಳ್ಳುವಂತೆ ಮಾಡಿದ. ಸಾಹಿತ್ಯಕ್ಕೂ ಕಲೆಗೂ ವಿಪುಲವಾದ ಪ್ರೋತ್ಸಾಹವನ್ನು ಕೊಟ್ಟ. ಧರ್ಮಾಭಿವೃದ್ಧಿಗೆ ನೆರವಾದ. ರಾಜ್ಯದಲ್ಲಿ ಶಾಂತಿ ಸುಭಿಕ್ಷೆ ನೆಲೆಸುವಂತೆ ಮಾಡಿದ. ಪೋರ್ಚುಗೀಸ್ ಯಾತ್ರಿಕ ಡೊಮಿಂಗೊ ಪೇ ಈತನ ರಾಜಧಾನಿಯನ್ನು ಕಂಡು ಅದನ್ನು ತನ್ನ ಬರಹಗಳಲ್ಲಿ ವರ್ಣಿಸಿದ್ದಾನೆ.

೨೦ ವರ್ಷಗಳ ಕಾಲ ಆಳಿದ ಕೃಷ್ಣದೇವರಾಯನ ನಂತರ ಆತನ ಮಲಸೋದರ ಅಚ್ಯುತದೇವರಾಯ ಪಟ್ಟಕ್ಕೆ ಬಂದ. ಈತ ಅಣ್ಣನಿಂದ ಪಡೆದ ರಾಜ್ಯವನ್ನು ರಕ್ಷಿಸಿಕೊಂಡು ಬಂದ. ಆದರೆ ಈ ವೇಳೆಗೆ ರಾಜ್ಯಕ್ಕಾಗಿ ಆಂತರಿಕ ಕಲಹಗಳು ತಲೆ ಎತ್ತಿದ್ದುವು. ತನ್ನ ಆಳಿಕೆಯ ಬಹುಕಾಲವನ್ನು ಈತ ಈ ರಾಜಕೀಯ ಚಟುವಟಿಕೆಗಳಲ್ಲಿಯೇ ವ್ಯಯಿಸಿದ. ಸಾಮಂತರಿಂದ ಬಂದ ಕಪ್ಪಕಾಣಿಕೆಗಳ ಮೂಲಕ ಹೇರಳವಾದ ಧನವನ್ನು ಸಂಗ್ರಹಿಸಿದ ಈತ ಆನಂದನಿಧಿ ಎಂಬ ದತ್ತಿಯನ್ನು ಸ್ಥಾಪಿಸಿ ಆ ನಿಧಿಯನ್ನು ದಾನ-ಧರ್ಮಗಳಿಗೆ ವಿನಿಯೋಗಿಸಿದ.

ತುಳುವ ಮನೆತನದ ಕೊನೆಯ ಅರಸ ಸದಾಶಿವರಾಯ. ಆದರೆ ಈತನ ಆಳಿಕೆಯಲ್ಲಿ ಅಧಿಕಾರ ಸೂತ್ರಗಳೆಲ್ಲ ಕೃಷ್ಣದೇವರಾಯನ ಅಳಿಯನಾದ ರಾಮರಾಯನಲ್ಲಿ ಕೇಂದ್ರೀಕೃತವಾಗಿದ್ದುವು. ಹೆಸರಿಗೆ ಮಾತ್ರ ಸದಾಶಿವರಾಯ ಅರಸನಾಗಿದ್ದ. ನಿಜವಾದ ಅಧಿಕಾರ ರಾಮರಾಯನದಾಗಿತ್ತು. ರಾಮರಾಯ ವಿಜಯನಗರ ಸಾಮ್ರಾಜ್ಯವನ್ನು ಉತ್ತರದ ಕಡೆ ಮತ್ತಷ್ಟು ವಿಸ್ತರಿಸಿದ್ದ. ಐದು ಭಾಗಗಳಾಗಿ ಒಡೆದಿದ್ದ ಬಹಮನಿ ರಾಜ್ಯದ ಸುಲ್ತಾನರು ತಮ್ಮ ತಮ್ಮಲ್ಲಿ ಕಚ್ಚಾಡುತ್ತಿದ್ದರು. ಇದರ ಲಾಭ ಪಡೆದ ರಾಮರಾಯ ಒಬ್ಬನ ವಿರುದ್ಧ ಇನ್ನೊಬ್ಬನನ್ನು ಎತ್ತಿಕಟ್ಟುವುದರ ಮೂಲಕ ತನ್ನ ಬಲವನ್ನು ಪ್ರದರ್ಶಿಸಿ ರಾಜ್ಯವನ್ನು ವಿಸ್ತರಿಸಿದ. ಆದರೆ ಕೊನೆಗೊಮ್ಮೆ ಈ ಐವರು ಷಾಹೀ ಸುಲ್ತಾನರುಗಳಿಗೆ ಸತ್ಯದ ಅರಿವಾಯಿತು. ಎಚ್ಚೆತ್ತ ಅವರು ಒಟ್ಟುಗೂಡಿದರು. ಬಿಜಾಪುರದ ಆದಿಲ್ ಷಾಹನನ್ನು ರಾಮರಾಯ ಮಗನಂತೆ ಕಾಣುತ್ತಿದ್ದ. ಅವನೂ ಕೊನೆಯ ಗಳಿಗೆಯಲ್ಲಿ ಇವರನ್ನು ಸೇರಿದ. ರಕ್ಕಸಗಿ ಮತ್ತು ತಂಗಡಗಿ ಎಂಬ ಗ್ರಾಮಗಳ ಮಧ್ಯೆ ಭೀಕರವಾದ ಕದನವಾಯಿತು. ತಾಳೀಕೋಟೆ ಕದನ ಎಂದು ಪ್ರಸಿದ್ಧ

ವಾದ ಈ ಯುದ್ಧದಲ್ಲಿ ರಾಮರಾಯ ಸೋತುಹೋದ. ಆತನನ್ನು ಕೊಂದು ತಲೆಯನ್ನು ಕಡಿಯಲಾಯಿತು. ೮೦ ವರ್ಷಗಳಿಗೂ ಮೀರಿದ ಈ ಮುದುಕ ಕೊನೆಯವರೆಗೂ ಧೈರ್ಯದಿಂದ ಹೋರಾಡಿ ಸಾವನ್ನಪ್ಪಿದ.

ಈ ಕದನದಲ್ಲಿ ಸೋತ ರಾಮರಾಯನ ಸೋದರರು ರಾಜಧಾನಿಗೆ ತ್ವರಿತ ಗತಿಯಲ್ಲಿ ಹಿಂದಿರುಗಿ ಸಾಧ್ಯವಿದ್ದಷ್ಟು ಧನಕನಕಗಳನ್ನು ಆನೆಗಳ ಮೇಲೆ ಹೇರಿಕೊಂಡು, ಅರಸನಾಗಿದ್ದ ಸದಾಶಿವರಾಯನೊಂದಿಗೆ ಪೆನುಗೊಂಡೆಗೆ ಓಡಿಹೋದರು. ಶತ್ರು ಸೈನ್ಯ ತಡವಾಗಿ ಹಂಪೆಗೆ ಬಂದರೂ, ಅಲ್ಲಿನ ಸಂಪತ್ತನ್ನು ಕೊಳ್ಳೆ ಹೊಡೆದು, ದೇವಾಲಯಗಳನ್ನು ಹಾಳುಗೆಡವಿ ಹಂಪೆಯನ್ನು ಕೊಂಪೆಯನ್ನಾಗಿ ಮಾಡಿಹೋದರು. ಹೀಗೆ ವಿಜಯನಗರ ಸಾಮ್ರಾಜ್ಯ ಅಳಿದರೂ ಪೆನುಗೊಂಡೆಯಿಂದ ರಾಮರಾಯನ ಸೋದರರೂ ಅವನ ಮನೆತನದವರೂ, ಕೆಲವು ವರ್ಷಗಳ ಕಾಲ ಆಳಿದರು. ಇವರು ಅರವೀಡು ಮನೆತನಕ್ಕೆ ಸೇರಿದವರು. ಇವರ ಉತ್ತರಾಧಿಕಾರಿಗಳಾಗಿ ಹಿಂದೂ ಧರ್ಮ-ಸಂಸ್ಕೃತಿಗಳನ್ನು ಮೈಸೂರಿನ ಒಡೆಯರು ರಕ್ಷಿಸಿಕೊಂಡು ಬಂದರು.



ಹವಾಮಹಲ್, ಪೆನುಗೊಂಡೆ

ಶತಮಾನಗಳಿಂದಲೂ ಕರ್ನಾಟಕದಲ್ಲಿ, ದಕ್ಷಿಣ ಭಾರತದಲ್ಲಿ ದೇವಾಲಯ ಒಂದು ಸಾಮಾಜಿಕ ಸಂಸ್ಥೆಯಾಗಿ ಬೆಳೆದುಬಂದಿದೆ. ಇದೊಂದು ವಿದ್ಯಾಕೇಂದ್ರ, ಧಾರ್ಮಿಕ ಕೇಂದ್ರ ಆಗಿರುವುದಲ್ಲದೆ ಸಂಗೀತ ಮುಂತಾದ ಲಲಿತ ಕಲೆಗಳಿಗೆ ಆಶ್ರಯ ನೀಡುತ್ತಾ ಬಂದಿದೆ. ಎಂತಲೇ ಇದಕ್ಕೆ ಹೆಚ್ಚಿನ ಮಹತ್ವ. ಗ್ರಾಮದಲ್ಲಿ ವಾಸದ ಮನೆಗಳು, ರಾಜಧಾನಿಯಲ್ಲಿ ಅರಮನೆಗಳು ಸಹ ಶಾಶ್ವತವಾಗಿ ಉಳಿಯಬಹುದಾದ ಕಲ್ಲಿನ ಕಟ್ಟಡಗಳಾಗಿರಲಿಲ್ಲ. ಆದರೆ ದೇವಾಲಯಗಳು ಆಚಂದ್ರಾರ್ಕವಾಗಿ ಉಳಿಯಲು ಅವುಗಳನ್ನು ಕಲ್ಲಿನಲ್ಲಿ ಕಟ್ಟಿದರು. ಆರಂಭದಲ್ಲಿ ದೇವರ, ಅವತಾರಪುರುಷರ ಶಿಲ್ಪಗಳನ್ನು ಗುಹೆಗಳಲ್ಲಿ ಕೆತ್ತುತ್ತಿದ್ದರು. ಕ್ರಮೇಣ ಕಲ್ಲನ್ನು ಒಡೆದು ದೇವಾಗಾರಗಳನ್ನು ಕಲ್ಲಿನ ಕಟ್ಟಡಗಳನ್ನು ಕಟ್ಟುವ ಸಂಪ್ರದಾಯ ಬೆಳೆಯಿತು. ಬಹಳ ಹಿಂದೆ ದೇವಾಲಯಗಳನ್ನು ಸಹ ಮರಗಳಲ್ಲಿ ಕಟ್ಟುತ್ತಿದ್ದರು. ನಂತರ ಕಟ್ಟಡಕ್ಕೆ ಇಟ್ಟಿಗೆಯನ್ನೂ ಕಲ್ಲನ್ನೂ ಉಪಯೋಗಿಸತೊಡಗಿದರು.

ದೇವಾಲಯವನ್ನು ಮಾನವ ದೇಹದೊಂದಿಗೆ ಸಮೀಕರಿಸಲಾಗಿದೆ. ಎಂತಲೇ ದೇವಾಲಯದ ಕಟ್ಟಡದ ಹಲವಾರು ಭಾಗಗಳಿಗೆ ದೇಹದ ವಿವಿಧ ಅಂಗಗಳ–ಪಾದ, ಚರಣ, ಅಂಘ್ರಿ, ಜಂಘಾ, ಕಟಿ, ಕುಕ್ಷಿ, ಗ್ರೀವ, ಕಂಠ, ಶಿಖರ, ಶಿರ, ಮಸ್ತಕ, ಮುಖ, ವಕ್ತ್ರ, ನಾಸಿಕ – ಇತ್ಯಾದಿ ಹೆಸರುಗಳನ್ನು ಕೊಡಲಾಗಿದೆ. ಮೊದಲು ಅಸ್ತಿತ್ವಕ್ಕೆ ಬಂದುದು ಕೇವಲ ಗರ್ಭಗೃಹ. ದೇವರನ್ನು ಈ ಸಣ್ಣ ಕೋಣೆಯಲ್ಲಿ ಇಟ್ಟು ಪೂಜಿಸುತ್ತಿದ್ದರು. ಈ ಗರ್ಭಗೃಹದ ಮೇಲೆ ಒಂದು ಶಿಖರವನ್ನು ಎತ್ತರಿಸಿ ಕಟ್ಟುತ್ತಿದ್ದರು. ಇದಕ್ಕೆ ವಿಮಾನ ಎಂದು ಹೆಸರು. ಕಟ್ಟಡದ ತಳಹದಿಯಿಂದ ಆರಂಭಿಸಿ, ಭಿತ್ತಿ (ಗೋಡೆ) ಹಾಗೂ ಪದ (ಕಂಭ), ಬೋದಿಗೆ (ಪ್ರಸ್ತರ), ಕಂಠ (ಗ್ರೀವ) ಮತ್ತು ಶಿಖರಗಳನ್ನೊಳಗೊಂಡ ಎಲ್ಲ ಭಾಗಕ್ಕೂ ವಿಮಾನವೆಂದು ಹೆಸರಿದೆ. ಸಾಮಾನ್ಯವಾಗಿ ಗರ್ಭಗೃಹದ ಸುತ್ತಲೂ ಇನ್ನೊಂದು ಗೋಡೆಯನ್ನು ಕಟ್ಟಿ, ಮೇಲ್ಭಾಗವನ್ನು ಮುಚ್ಚಿದಾಗ ಆ ಗರ್ಭಗೃಹಕ್ಕೆ ಪ್ರದಕ್ಷಿಣೆ ಹಾಕಲು ಸಾಧ್ಯವಾಗುತ್ತದೆ. ಇದು ಪ್ರದಕ್ಷಿಣಾಪಥ. ಇಂತಹ ಪ್ರದಕ್ಷಿಣಾಪಥವನ್ನೊಳಗೊಂಡ ಆಲಯವನ್ನು ಸಾಂಧಾರವೆಂದೂ, ಹಾಗಿಲ್ಲದವುಗಳನ್ನು ನಿರಂಧಾರವೆಂದೂ ಕರೆಯುತ್ತಾರೆ.

ಶಿಖರದ ಮೇಲೆ ಸ್ತೂಪಿ ಇರುತ್ತದೆ. ಇದು ಕವುಚಿದ ಬೋಗುಣಿ ಅಥವಾ ಗಂಟೆಯಾಕಾರದಲ್ಲಿದ್ದು ಮೇಲುಗಡೆ ಒಂದು ಕಳಶವಿರುತ್ತದೆ. ಶಿಖರದ

ಬುಡದಲ್ಲಿ ಮುಂದಕ್ಕೆ ಚಾಚಿದ ಭಾಗವಿದ್ದು ಅದರ ಮೇಲೆ ತೆರೆದ ಬಾಯಿನ ಸಿಂಹಮುಖದಂತಹ ಆಕೃತಿ ಇರುತ್ತದೆ. ಇದಕ್ಕೆ ಕೀರ್ತಿಮುಖ ಎಂದು ಹೆಸರು. ಈ ಕೀರ್ತಿಮುಖದ ಮಧ್ಯೆ ಒಮ್ಮೊಮ್ಮೆ ಶಿಲ್ಪಗಳನ್ನೂ ಕೆತ್ತಿರುತ್ತಾರೆ.

ಗರ್ಭಗೃಹದ ಮುಂದುಗಡೆ ಅದಕ್ಕೆ ಹೊಂದಿಕೊಂಡಂತಿರುವುದು ಅಂತರಾಳ. ಇದು ಆಯಾಕಾರವಾಗಿರುತ್ತದೆ. ಇದನ್ನೇ ಸುಕನಾಸಿಯೆಂದೂ ಅರ್ಧಮಂಟಪವೆಂದೂ ಕರೆಯುತ್ತಾರೆ. ಆರಂಭದ ಕಾಲದ ದೇವಾಲಯಗಳಲ್ಲಿ ಗರ್ಭಗೃಹ ಮತ್ತು ಈ ಅರ್ಧಮಂಟಪ ಮಾತ್ರ ಕಂಡುಬರುತ್ತದೆ. ಆಗ ಇದು ದೇವಾಲಯದ ಮುಖಮಂಟಪವೆಂದೂ ಎನಿಸಿಕೊಳ್ಳುತ್ತದೆ. ಆದರೆ ತದನಂತರ ದೇವಾಲಯಕ್ಕೆ ಇತರ ಭಾಗಗಳನ್ನು ಸೇರಿಸಿದಾಗ–ಇದು ಅರ್ಧಮಂಟಪವಾಯಿತು. ನವರಂಗ ಎಂಬುದು ಈ ಅಂತರಾಳದ ಮುಂದುಗಡೆಗೆ ಸೇರಿಸಲಾದ ಭಾಗ. ಚಾಲುಕ್ಯರ ಕಾಲದಲ್ಲಿ ಇದು ಗೋಡೆಗಳಿಲ್ಲದೆ ತೆರೆದ ಅಥವಾ ಕೆಲವು ಸಂದರ್ಭಗಳಲ್ಲಿ ಮುಚ್ಚಿದ ಮಂಟಪವಾಗಿತ್ತು. ಸಾಮಾನ್ಯವಾಗಿ ಇದರ ಮಧ್ಯದಲ್ಲಿ ನಾಲ್ಕು ಕಂಬಗಳು ಮತ್ತು ಹೊರ ಎಲ್ಲೆಗಳಲ್ಲಿ ಹನ್ನೆರಡು ಕಂಬಗಳು ಇರುತ್ತಿದ್ದವು. ಅರ್ಧ ಮಂಟಪದ ಮುಂದಿನ ಭಾಗ ಮಹಾಮಂಟಪ. ಇದಕ್ಕೂ ಮುಂಭಾಗದಲ್ಲಿ ದೇವಾಲಯವನ್ನು ಪ್ರವೇಶಿಸುತ್ತಿದ್ದಂತೆಯೇ ಕಾಣಸಿಗುವ ಮಂಟಪ ಮುಖಮಂಟಪ. ದಕ್ಷಿಣ ಭಾರತದ ದೇವಾಲಯಗಳಲ್ಲಿ ಈ ಮಂಟಪಗಳು ಸಾಮಾನ್ಯವಾಗಿ ಚಪ್ಪಟೆಯಾದ ಚಾವಣಿಗಳನ್ನು ಹೊಂದಿರುತ್ತವೆ. ಆದರೆ ಉತ್ತರ ಭಾರತದ ಆಲಯಗಳಲ್ಲಿ ಇವುಗಳಿಗೂ ಸಣ್ಣ ಗೋಪುರಗಳಿದ್ದು ಅವುಗಳ ಮೇಲೆ ಘಂಟೆಯಾಕಾರದ ಸ್ತೂಪಿ ಇರುತ್ತದೆ. ಕೆಲವು ದೇವಾಲಯಗಳಲ್ಲಿ ಒಂದಕ್ಕೂ ಹೆಚ್ಚಿನ ಗರ್ಭಗೃಹಗಳಿರುತ್ತವೆ. ಎರಡು ಗರ್ಭಗೃಹಗಳಿರುವುದನ್ನು ದ್ವಿಕೂಟಾಚಲ ಎಂದೂ, ಮೂರು ಗರ್ಭಗೃಹಗಳಿರುವುದನ್ನು ತ್ರಿಕೂಟಾಚಲವೆಂದೂ ಕರೆಯಲಾಗಿದೆ. ಕೆಲವೊಮ್ಮೆ ನಾಲ್ಕು ಗರ್ಭಗೃಹಗಳು (ಚತುಷ್ಕೂಟ) ಇರುವುದೂ ಉಂಟು. ಆದರೆ ಇದು ಬಹಳ ಅಪರೂಪ. ಈ ಕಾಲದ ದೇವಾಲಯಗಳಲ್ಲಿ ಸಾಮಾನ್ಯವಾಗಿ ಸುತ್ತಲಿನ ಪ್ರಾಕಾರದ ಗೋಡೆ ಇರುವುದಿಲ್ಲ. ಇವು ವಿಜಯನಗರದ ಹಿಂದಿನ ಕಾಲದ ವಾಸ್ತುಶಿಲ್ಪದ ಕೆಲವು ಲಕ್ಷಣಗಳು.

ಆದರೆ ವಿಜಯನಗರದ ಕಾಲದಲ್ಲಿ ಇವುಗಳಲ್ಲಿ ಕೆಲವು ಬದಲಾವಣೆಗಳಾದುದಲ್ಲದೆ, ಹಲವಾರು ಹೊಸ ಅಂಶಗಳೂ ಸೇರಿಕೊಂಡವು. ಹಿಂದೂಧರ್ಮವನ್ನು ರಕ್ಷಿಸಲೆಂದು ಈ ಹೊಸ ಸಾಮ್ರಾಜ್ಯ ಹುಟ್ಟಿಕೊಂಡಿತು ಎಂಬುದನ್ನು ಮೇಲೆ ನೋಡಿದ್ದೇವೆ. ಧರ್ಮಪ್ರಚಾರಕ್ಕಾಗಿ ದೇವಾಲಯಗಳನ್ನು ಮಾಧ್ಯಮಗಳಾಗಿ

ಆಗ ಉಪಯೋಗಿಸಿಕೊಳ್ಳಲಾಯಿತು. ದೇವರ ಪೂಜೆಗೆ ಸಂಬಂಧಿಸಿದಂತೆ ಹೊಸ ಹೊಸ ಉತ್ಸವಗಳನ್ನು ಅಳವಡಿಸಿಕೊಳ್ಳಲಾಯಿತು. ಹಿಂದೂಸಂಸ್ಕೃತಿಯ ವಿಶ್ವ ವೈಶಿಷ್ಟ್ಯಗಳನ್ನೂ ಸಂರಕ್ಷಿಸಿ, ಪುನಃಶ್ಚೇತನಗೊಳಿಸಿ ವೈಭವೋಪೇತವಾಗಿ ಮಾಡುವುದು ಅಂದಿನ ಅರಸರ ಪ್ರಮುಖ ಕರ್ತವ್ಯವಾಗಿತ್ತು. ವಿದ್ಯೆ, ಸಂಗೀತ, ಲಲಿತಕಲೆ ಮುಂತಾದವುಗಳಿಗೆ ವಿಶೇಷ ಪ್ರೋತ್ಸಾಹ ನೀಡಲಾಯಿತು. ಈ ದಿಶೆಯಲ್ಲಿ ದೇವಾಲಯಗಳು ವಿಶೇಷವಾದ ಆಸಕ್ತಿಯನ್ನು ತಾಳಿದುವು. ಧರ್ಮದ ಈ ಪುನರುತ್ಥಾನ ಕಾರ್ಯದ ಪರಿಣಾಮವಾಗಿ ಧಾರ್ಮಿಕ ವೈದಿಕ ಗ್ರಂಥಗಳೂ, ಅವುಗಳಿಗೆ ಟೀಕೆಗಳೂ, ಕಾವ್ಯ, ನಾಟಕ, ಪುರಾಣಾದಿ ಸಾಹಿತ್ಯ ಪ್ರಕಾರಗಳೂ ಹುಟ್ಟಿಕೊಂಡವು. ದೇವಾಲಯಗಳ ಗೋಡೆಗಳ ಮೇಲೆ, ಕಂಬಗಳ ಮೇಲೆ ಈ ಪೌರಾಣಿಕ, ಕಾವ್ಯಾತ್ಮಕ ಕತೆಗಳ ಪ್ರಾತ್ಯಕ್ಷಿಕೆಗಳನ್ನು ಮೂಡಿಸಲಾಯಿತು. ಇದಕ್ಕಾಗಿ ಶಿಲ್ಪಿಗಳು, ರೂವಾರಿಗಳು ಶ್ರಮಿಸಿದರು. ಜೊತೆಗೆ ವೀರತ್ವಕ್ಕೆ, ಶೌರ್ಯಕ್ಕೆ ಹೆಚ್ಚಿನ ಪ್ರೋತ್ಸಾಹ ಕೊಡಲೆಂಬಂತೆ ಆ ಗುಣಗಳೇ ಮೈವೆತ್ತಿ ಬಂದಂತಿದ್ದ ರಾಮ, ಹನುಮಂತ, ಕೃಷ್ಣ, ಭೀಮ, ಅರ್ಜುನ ಮುಂತಾದವರ ಕತೆಗಳನ್ನು ಶಿಲ್ಪಗಳಲ್ಲಿ ಮೂಡಿಸಲಾಯಿತು. ಈ ಮೊದಲು ಶಿಲ್ಪಕಲೆಗೆ ಇಂತಹ ಕಥೆಗಳಾವುವೂ ಇಷ್ಟು ವಿಪುಲವಾಗಿ ವಸ್ತುಗಳಾಗಿರಲಿಲ್ಲ. ಸೈನ್ಯದ ವಿವಿಧ ಅಂಗಗಳಾದ ಪದಾತಿ, ಆನೆಗಳು, ಕುದುರೆಗಳು ಇತ್ಯಾದಿಗಳು, ಯುದ್ಧದ ಚಿತ್ರಗಳು, ಆಯುಧಗಳು ಹಿಂದೆಂದೂ ಈ ಕಾಲದಲ್ಲಿದ್ದಷ್ಟು ಕಲಾವಸ್ತುಗಳಾಗಿರಲಿಲ್ಲ. ಪ್ರಜೆಗಳನ್ನು ವೀರಪುರುಷರನ್ನಾಗಿ ಮಾಡಲು ನಡೆಸಿದ ಯತ್ನಗಳಲ್ಲಿ ಇದೂ ಒಂದಾಗಿತ್ತು. ಇವು ಪ್ರಜೆಗಳಿಗೆ ಸ್ಫೂರ್ತಿಯನ್ನು ನೀಡಿ, ಅವರು ದೇಶದ ರಕ್ಷಣೆಗಾಗಿ, ಧರ್ಮದ ರಕ್ಷಣೆಗಾಗಿ ಜೀವವನ್ನು ಮುಡುಪಾಗಿಡಲು, ಅವರನ್ನು ಹುರಿದುಂಬಿಸಲು ಹೂಡಿದ ತಂತ್ರವಿಧಾನ ಎನ್ನಬಹುದು.

ಈ ಕಾಲದ ವಾಸ್ತುಶಿಲ್ಪದ ವೈಶಿಷ್ಟ್ಯವನ್ನು ಹಿರಿದಾದ ಗಾತ್ರ, ವೈಭವೋಪೇತವಾದ ಪೌರುಷತ್ವ, ಅತಿಶಯ ಅಲಂಕರಣಗಳಲ್ಲಿಯೂ ಕಾಣಬಹುದು. ಅವೆಲ್ಲವುಗಳೂ ಉತ್ತುಂಗ, ಭವ್ಯ. ದಕ್ಷಿಣ ಭಾರತದ ಇತಿಹಾಸದಲ್ಲಿಯೇ ಮೊದಲ ಬಾರಿ ಈ ಸಾಮ್ರಾಜ್ಯ ಇಡೀ ದಕ್ಷಿಣದ ಪ್ರದೇಶವನ್ನು ಆವರಿಸಿತ್ತು. ಭಿನ್ನ ಭಾಷೆಗಳ, ಭಿನ್ನ ಪ್ರಾದೇಶಿಕ ಸಂಸ್ಕೃತಿ ವೈಶಿಷ್ಟ್ಯಗಳ ಸಮಾವೇಶವಾಗಿತ್ತು. ಆ ಪ್ರದೇಶಗಳ ರೂಢಿಯಲ್ಲಿದ್ದ ವಾಸ್ತುಶಿಲ್ಪ ಶೈಲಿಗಳಲ್ಲಿ ಸಹ ಈಗ ಏಕರೂಪತೆಯನ್ನು ಸಾಧಿಸಲು ಯತ್ನಿಸಲಾಯಿತು. ಆದರೆ ಆ ಪ್ರದೇಶಗಳಲ್ಲಿ



ಚಿಂತಲರಾಯಸ್ವಾಮಿ ದೇವಸ್ಥಾನದಲ್ಲಿನ ದಶಕಂಠ ಮತ್ತು ಆಂಜನೇಯ

ಲೇಪಾಕ್ಷಿ – ವರ್ಣಚಿತ್ರ

ವೈಶಿಷ್ಟ್ಯಗಳನ್ನು ಕಡೆಗಾಣಿಸದೆ, ಬೆಳೆಸಿಕೊಂಡು ಬರಲಾಯಿತು. ಉತ್ತರ ಕರ್ನಾಟಕ, ಆಂಧ್ರಪ್ರದೇಶಗಳಲ್ಲಿ ಮೊದಲಿನ ಚಾಲುಕ್ಯ, ಹೊಯ್ಸಳ, ಕಾಕತೀಯ ಶೈಲಿಗಳನ್ನು ಉಳಿಸಿಕೊಂಡು ಪರಿಸ್ಥಿತಿಗನುಗುಣವಾಗಿ ಬೆಳೆಸಿಕೊಳ್ಳಲಾಯಿತು. ಅಂತೆಯೇ ತಮಿಳುನಾಡಿನಲ್ಲಿ, ಪಾಂಡ್ಯ ಅರಸರು ರೂಢಿಸಿದ್ದ ಸಂಪ್ರದಾಯಗಳನ್ನು ಮುಂದುವರಿಸಿಕೊಂಡು ಬರಲಾಯಿತು.

ಇವರು ಉಪಯೋಗಿಸಿದ ಶಿಲೆ ಗ್ರಾನೈಟ್. ಇದು ಹೆಚ್ಚು ಭಾರವನ್ನು ಹೊರಬಲ್ಲುದಾಗಿತ್ತು. ಆದ್ದರಿಂದ ಕಂಬಗಳ ನೆರವಿಂದ ವಿಸ್ತಾರವಾದ ಮಂಟಪಗಳನ್ನು ಕಟ್ಟಲು ಸಾಧ್ಯವಾಯಿತು. ಚಾಲುಕ್ಯ–ಹೊಯ್ಸಳರ ಶೈಲಿಯ ಕುಸುರಿ ಕೆಲಸದ ಕೆತ್ತನೆ ಇಂತಹ ಕಲ್ಲುಗಳಲ್ಲಿ ಸಾಧ್ಯವಿರಲಿಲ್ಲ. ಆದುದರಿಂದ ಮೂರ್ತಿಶಿಲ್ಪಗಳು ಸಹ ಆಕಾರದಲ್ಲಿ ದೊಡ್ಡವಾದುವು. ತಮಿಳುನಾಡಿನಲ್ಲಿ ಚೋಳರು, ಪಾಂಡ್ಯರು, ದೇವಾಲಯಗಳ ಮುಂಭಾಗದ ದ್ವಾರದಲ್ಲಿ ಗೋಪುರಗಳನ್ನು ಕಟ್ಟುವ ಸಂಪ್ರದಾಯವನ್ನು ಆರಂಭಿಸಿದ್ದರು. ಇದನ್ನು ವಿಜಯನಗರದ ಅರಸರು ಮುಂದುವರಿಸಿಕೊಂಡು ಬಂದರು. ಗೋಪುರಗಳ ಎತ್ತರವನ್ನು ಹೆಚ್ಚಿಸಿದರು. ದೇವಾಲಯಗಳ ಎರಡು ಕಡೆ, ಕೆಲವು ಸಂದರ್ಭಗಳಲ್ಲಿ ನಾಲ್ಕೂ ಕಡೆಗಳಲ್ಲಿ, ಈ ಗೋಪುರಗಳನ್ನು ನಿರ್ಮಿಸಲಾಯಿತು. 'ರಾಯ'ಎಂಬ ನಾಮಾಂಕಿತ ಪಡೆದಿದ್ದ ಅರಸರ ನೆನಪಿನಲ್ಲಿ ಇವುಗಳನ್ನು ರಾಯಗೋಪುರಗಳೆಂದೇ ಕರೆಯಲಾಯಿತು. ದೇವಾಲಯದ ಸುತ್ತಲೂ ಪ್ರಾಕಾರಗಳನ್ನು ಅದಕ್ಕಾಗಿ ಕಟ್ಟಲಾಯಿತು. ಅವುಗಳಿಗೆ ಹೊಂದಿಕೊಂಡಂತೆ ಮಂಟಪಗಳೂ, ಉಪಗುಡಿಗಳೂ ಅಸ್ತಿತ್ವಕ್ಕೆ ಬಂದವು. ಈ ವಿಧದ ಅಲಂಕೃತ ಮಂಟಪಗಳಿಗೆ ಕಲ್ಯಾಣಮಂಟಪ, ಊಂಜಲ್ (ಉಯ್ಯಾಲೆ) ಮಂಟಪ, ವಸಂತಮಂಟಪ, ವಾಹನಮಂಟಪ, ರಂಗಮಂಟಪ, ಕನ್ನಡಿಮಂಟಪಗಳೆಂಬ ಹೆಸರುಗಳನ್ನಿಡಲಾಯಿತು.

ವಾಸ್ತವಿಕವಾಗಿಯೇ ಇಷ್ಟು ವಿಸ್ತಾರವಾದ ದೇವಾಲಯಗಳನ್ನು ಸಣ್ಣ ಸಣ್ಣ ಗ್ರಾಮಗಳಲ್ಲಿ ಕಟ್ಟುವುದು ಸಾಧ್ಯವಾಗುತ್ತಿರಲಿಲ್ಲ. ಹಿಂದಿನ ಶತಮಾನಗಳಲ್ಲಿ ಹಲವಾರು ದೇವಾಲಯಗಳನ್ನು ಕೆಲವು ಅಧಿಕಾರಿಗಳು ವೈಯಕ್ತಿಕವಾಗಿ, ತಮ್ಮ ಖರ್ಚಿನಲ್ಲಿಯೇ ಕಟ್ಟಿಸಿದುದಕ್ಕೆ ಅನೇಕ ಉದಾಹರಣೆಗಳಿವೆ. ಆದರೆ ಈಗ ದೇವಾಲಯಗಳು ಅನೇಕ ಭಾಗಗಳನ್ನು ಒಳಗೊಂಡು ಸಂಕೀರ್ಣಗೊಂಡುದರಿಂದ ವೈಯಕ್ತಿಕವಾಗಿ ಇಂತಹ ದೇವಾಲಯಗಳನ್ನು ಕಟ್ಟಿಸುವುದು ದುಸ್ಸಾಧ್ಯವೆನಿಸಿತು. ಇದು ಮಂಡಲೀಕರು, ಅರಸರು ತಮ್ಮ ಭಂಡಾರದ ನಿಧಿಯನ್ನು ವ್ಯಯಿಸಿ ಮಾಡಬೇಕಾದ ಕಾರ್ಯವೆನಿಸಿತ್ತು. ಆದಕಾರಣ ಇದುವರೆಗೆ ಪವಿತ್ರ

ಕ್ಷೇತ್ರಗಳೆನಿಸಿದ್ದ ಕಡೆಗಳಲ್ಲಿ ಮೊದಲಿದ್ದ ದೇವಾಲಯಗಳನ್ನು ವಿಸ್ತರಿಸಿ ಕಟ್ಟಲಾಯಿತು. ಹೊಸ ಆಲಯಗಳೂ ಅಂತಹ ಕಡೆ ಅಸ್ತಿತ್ವಕ್ಕೆ ಬಂದುವು. ಆದರೂ ವಿಜಯಗನರದ ಕಾಲದಲ್ಲಿ ಹಂಪೆ, ತಿರುಪತಿ, ಕಾಂಚಿ, ಶ್ರೀರಂಗ, ಕುಂಭಕೋಣ, ಶ್ರೀಶೈಲ, ಸಿಂಹಾಚಲ ಮುಂತಾದ ಕ್ಷೇತ್ರಗಳು ಪ್ರಾಮುಖ್ಯ ಪಡೆದುವು.

ವಿಜಯನಗರದ ವಾಸ್ತುಶಿಲ್ಪದಲ್ಲಿ ಕೆಲವು ಘಟ್ಟಗಳನ್ನು ಗುರುತಿಸಬಹುದು. ಆರಂಭಕಾಲದ ಅರಸರು ಪ್ರಾಕೃತಿಕ ಕಾರಣಗಳಿಂದ ಜೀರ್ಣಗೊಂಡಿದ್ದ, ಘಾತುಕ ಕೃತ್ಯಗಳಿಂದ ಹಾಳುಕೆಡವಲಾಗಿದ್ದ ದೇವಾಲಯಗಳ ಪುನರ್ನಿರ್ಮಾಣಕ್ಕೆ, ಅಲ್ಲಿ ಪೂಜೆ ಪುನಸ್ಕಾರ ಮುಂತಾದವುಗಳ ಪುನರ್ವ್ಯವಸ್ಥೆಗೆ ದಾನಗಳನ್ನು ನೀಡಿದರು. ಅದರ ಫಲವಾಗಿ ಹಲವಾರು ದೇವಾಲಯಗಳನ್ನು ಜೀರ್ಣೋದ್ಧಾರ ಮಾಡಿದ ಸಂದರ್ಭಗಳಲ್ಲಿ ಹೊಸ ಭಾಗಗಳನ್ನು ಸಮಯೋಚಿತವಾಗಿ ಅಳವಡಿಸಲಾಯಿತು. ಪ್ರಾಕಾರದ ಗೋಡೆಗಳನ್ನೆಬ್ಬಿಸುವ, ಗೋಪುರಗಳನ್ನು, ಉಪಗುಡಿಗಳನ್ನು ಕಟ್ಟಿಸುವ ಕಾರ್ಯಗಳನ್ನು ಕೈಗೊಳ್ಳಲಾಯಿತು. ಎರಡನೇ ಘಟ್ಟದಲ್ಲಿ ಸಾಳುವ ನಾರಸಿಂಹ, ಕೃಷ್ಣದೇವರಾಯ, ಅಚ್ಯುತರಾಯ ಮುಂತಾದವರು ತೀರ್ಥಕ್ಷೇತ್ರಗಳಲ್ಲಿನ ದೇವಾಲಯಗಳಿಗೆ ಹೇರಳವಾದ ದಾನಗಳನ್ನು ನೀಡಿ ಅಲ್ಲಿ ಹೊಸ ಮಂಟಪ ಮುಂತಾದವುಗಳ ರಚನೆ, ಹೊಸ ಹೊಸ ಉತ್ಸವಗಳ ಆರಂಭ, ದೇವಾಲಯಕ್ಕೆ ಬರುವ ಯಾತ್ರಿಗಳ ಸೌಕರ್ಯಗಳಿಗಾಗಿ ಅನ್ನಸತ್ರ ಮುಂತಾದವುಗಳ ಏರ್ಪಾಡುಗಳನ್ನು ಮಾಡಿದುದಲ್ಲದೆ ಹೊಸ ದೇವಾಲಯಗಳನ್ನೂ ನಿರ್ಮಿಸಿದರು. ತಾಳೀಕೋಟೆಯ ಕದನಾನಂತರ ಹಂಪೆ ಕೊಂಪೆಯಾದರೂ ಪಾಳೆಯಗಾರರಾಗಿದ್ದ ನಾಯಕ ಮನೆತನದವರು ವಿಜಯನಗರದ ಸಂಸ್ಕೃತಿಯನ್ನು ಉಳಿಸಿ ಬೆಳೆಸಿಕೊಂಡರು. ತಮಿಳುನಾಡಿನಲ್ಲಿ ತಂಜಾವೂರಿನ, ಮಧುರೆಯ, ಜಿಂಜಿಯ ನಾಯಕರು, ಕರ್ನಾಟಕದಲ್ಲಿ ಕೆಳದಿಯ ನಾಯಕರು, ಮೈಸೂರಿನ ಒಡೆಯರು ವಿಜಯನಗರದ ಸಂಸ್ಕೃತಿಯನ್ನು ಕಾಪಾಡಿಕೊಂಡು ಬಂದರು.

ವಿಜಯನಗರದ ವಾಸ್ತುಶಿಲ್ಪವನ್ನು ಲೌಕಿಕ ಹಾಗೂ ಧಾರ್ಮಿಕ ವಾಸ್ತುಶಿಲ್ಪಗಳೆಂದು ವಿಂಗಡಿಸಬಹುದು. ಲೌಕಿಕ ಕಟ್ಟಡಗಳು ನಮಗೆ ಕಾಣಬರುವುದು ಹಂಪೆಯಲ್ಲಿ. ಇದು ಸಾಮ್ರಾಜ್ಯದ ರಾಜಧಾನಿ, ಇಲ್ಲಿನ ಕೋಟೆಯ ಒಳಗೆ ಅರಸನ ಅರಮನೆ, ಅದಕ್ಕೆ ಸಂಬಂಧಿಸಿದ ಇತರ ಮಂಟಪಗಳು, ಅರಸಿಯರ ಈಜುಕೊಳ, ಕಮಲ ಮಹಲ್, ಆನೆಯ ಲಾಯಗಳು, ಕಾವಲು ಗೋಪುರ ಮತ್ತು ದೇವಾಲಯದ ಸಮೀಪದಲ್ಲಿದ್ದ ಮಾರುಕಟ್ಟೆಯ ಸ್ಥಳ–ಈ ಕಟ್ಟಡಗಳ

ತಳಪಾಯ ಮಾತ್ರ ಕಲ್ಲಿನಲ್ಲಿ ಕಟ್ಟಲಾಗಿದ್ದು, ಮೇಲಿನಸ್ತರಗಳನ್ನೆಲ್ಲ ಮರಮುಟ್ಟುಗಳಿಂದ, ಗಾರೆಗಳಿಂದ ಕಟ್ಟಲಾಗಿವೆ. ಕಂಬಗಳಿಗು ಸಹ ಕಲ್ಲು ಅಥವಾ ಮರವನ್ನು ಉಪಯೋಗಿಸಲಾಗಿತ್ತು. ಕೆಲವು ಕಂಬಗಳ ಒಳಭಾಗ ಕಲ್ಲಿನದಾಗಿದ್ದು, ಅದರ ಸುತ್ತಲೂ ಇಟ್ಟಿಗೆ, ಗಾರೆಗಳನ್ನು ಬಳಸಿ ಕಂಬದ ಗಾತ್ರವನ್ನು ಹೆಚ್ಚಿಸುವ ತಂತ್ರವನ್ನು ಬಳಸಲಾಗಿತ್ತು. ಕಮಾನುಗಳ ಉಪಯೋಗ ಒಂದು ವಿಶೇಷ. ವಿಜಯನಗರದ ರಾಜಧಾನಿ ಸುಮಾರು ೨೬ ಚದರ ಕಿಲೋಮೀಟರುಗಳಷ್ಟು ವಿಸ್ತಾರವಾಗಿತ್ತು. ಸುತ್ತಲೂ ಕಲ್ಲಿನ ಕೋಟೆ. ಈ ಕೋಟೆಯ ಗೋಡೆಗಳು ಅತ್ಯಂತ ದಪ್ಪವಾಗಿದ್ದವು. ದೊಡ್ಡ ದೊಡ್ಡ ಬಂಡೆಗಲ್ಲುಗಳನ್ನು ಕೆತ್ತಿ ನಯ ಮಾಡಿ ಒಂದರ ಪಕ್ಕದಲ್ಲೊಂದರಂತೆ ಜೋಡಿಸಲಾಗಿತ್ತು. ಒಂದೊಂದನ್ನು ಬೆಣೆಯಾಕಾರದಲ್ಲಿ ಕೆತ್ತಿ ಬೆಣೆಯ ಚೂಪಾದ ತುದಿಗಳನ್ನು ಒಳಮುಖವಾಗಿ ಬರುವಂತೆ ಕೂಡಿಸಿ ಮಧ್ಯದ ಜಾಗದಲ್ಲಿ ಮಣ್ಣನ್ನು ತುಂಬಲಾಗುತ್ತಿತ್ತು. ಈ ಗೋಡೆಗಳ ಕಲ್ಲುಗಳನ್ನು ಕೂಡಿಸಿದಾಗ, ಯಾವ ವಿಧವಾದ ಲೇಪವೂ ಇಲ್ಲದೆ ಸಿಮೆಂಟು, ಗಾರೆಯನ್ನು ಉಪಯೋಗಿಸದೆ ಇದ್ದುದ್ದು ಈ ರಚನೆಯ ವಿಶೇಷ.

ದೇವಾಲಯಗಳು ಧಾರ್ಮಿಕ ಕಟ್ಟಡಗಳು. ಇವುಗಳಲ್ಲಿ ಕಂಡುಬಂದ, ಹೊಸದಾಗಿ ರೂಪಿಸಲಾದ ಶಿಲ್ಪ ಇತ್ಯಾದಿಗಳ ಆಧಾರದ ಮೇಲೆ ಈ ಕಾಲದ ಶೈಲಿ ಸ್ವತಂತ್ರವಾದ ವಿಜಯನಗರದ ಶೈಲಿ ಎಂಬ ಹೆಸರನ್ನು ಪಡೆಯಿತು. ಹಂಪೆಯಲ್ಲಿರುವ ಅನೇಕ ದೇವಾಲಯಗಳಲ್ಲಿ ಸಾಮಾನ್ಯವಾಗಿ ಗರ್ಭಗೃಹ ಮತ್ತು ಅಂತರಾಳಗಳಿಗೆ ಹೊಂದಿದಂತೆ ಮುಚ್ಚಿದ ಕಂಬಗಳುಳ್ಳ ಪ್ರದಕ್ಷಿಣಾಪಥವಿರುತ್ತದೆ. ಗರ್ಭಗೃಹ ಮತ್ತು ಅಂತರಾಳಗಳಿಗೆ ಸೇರಿದಂತೆ ಒಂದು ಅಧಿಷ್ಠಾನ. ಇದು ಪ್ರಾಕಾರಕ್ಕಿಂತ ಸ್ವಲ್ಪ ಕೆಳಮಟ್ಟದಲ್ಲಿರುತ್ತದೆ. ಪ್ರಾಕಾರದ ಭಿತ್ತಿಯ ಹೊರಭಾಗವನ್ನು ಗೋಡೆಗಂಬಗಳು ಕುಂಭಪಂಜರ, ದೇವಕೋಷ್ಠ ಮತ್ತು ಅಧಿಷ್ಠಾನದಲ್ಲಿ ಕಂಡುಬರುವ ಅಲಂಕಾರಿಕ ಅಚ್ಚುಪಟ್ಟಿ (moulding) ಗಳಿಂದ ಅಲಂಕರಿಸಲಾಗಿರುತ್ತದೆ. ದೇವಕೋಷ್ಠ ಎಂದರೆ ಗೋಡೆಯಲ್ಲಿನ ಗೂಡು. ಕುಂಭಪಂಜರ ಎಂದರೆ ಮಡಕೆಯಂತಹ ಆಕಾರದ ಕೆತ್ತನೆ. ಅದರ ಬಾಯಿಂದ ಒಂದು ಕಂಭ ಅಥವಾ ಮರ ಹೊರಬಂದಂತೆ ತೋರಿಸಲಾಗಿದ್ದು, ಮೇಲ್ಭಾಗದಲ್ಲಿ ಅದು ಛತ್ರಿಯಾಕಾರದಲ್ಲಿ ಹರಡಿಕೊಂಡಂತೆ ತೋರುತ್ತದೆ. ಇದೊಂದು ಅಲಂಕಾರಿಕ ಕೆತ್ತನೆ.

ಅರ್ಧಮಂಟಪದ ಮಧ್ಯದಲ್ಲಿ ನಾಲ್ಕು ಅಲಂಕಾರ ಮಾಡಿದ ಕಂಬಗಳಿದ್ದು, ಎರಡು ಬದಿಗಳಲ್ಲೂ ಕೈಸಾಲೆಗಳಿರುತ್ತವೆ. ಮಹಾಮಂಟಪವಂತೂ ವಿಸ್ತಾರ

ವಾದ ಕೆತ್ತನೆಯ ಕೆಲಸವನ್ನೊಳಗೊಂಡ ಭಾಗ. ಇಲ್ಲಿನ ಕಂಬಗಳು ನೋಡಲು ರಮ್ಯ. ಕಂಬದ ಸುತ್ತಲೂ ಕಂಬವನ್ನು ಆಸರೆಯನ್ನಾಗಿ ಮಾಡಿಕೊಂಡು ಹಿರಿಯ ಪ್ರಮಾಣದ ಶಿಲ್ಪಗಳನ್ನು ಕೆತ್ತಲಾಗಿದೆ. ಈ ಶಿಲ್ಪಗಳಲ್ಲಿ ಪ್ರಮುಖವಾದುದು ಮುಂದಿನ ಎರಡು ಕಾಲುಗಳನ್ನೆತ್ತಿ ಮುನ್ನುಗ್ಗುವಂತೆ ತೋರುವ ಕುದುರೆಗಳು ಅಥವಾ ಹುಲಿಗಳು. ಇನ್ನೊಂದು ವಿಧದ ಕಂಬಗಳಲ್ಲಿ ಮಧ್ಯಭಾಗ ತೆಳು ವಾಗಿದ್ದು, ಅದರ ಸುತ್ತಲೂ ಮೂಲೆಗಂಬಗಳನ್ನು ನಿಲ್ಲಿಸಲಾಗಿದ್ದು, ಈ ಕಂಬ ಗಳನ್ನು ಸಣ್ಣ ಕೋಲಿನಿಂದ ಬಾರಿಸಿದಾಗ ನಾದ ಹೊರಡುತ್ತದೆ. ಕಂಬದ ಮೇಲೆ ಬೋದಿಗೆಯಲ್ಲಿ ಮುಂದೆ ಚಾಚಿದ ಪೀಠ, ಅದರ ಲೋಲಕದಲ್ಲಿ ಕೆಳಮುಖ ವಾಗಿರುವ ತಾವರೆಯ ಮೊಗ್ಗು.

ಕಲ್ಯಾಣಮಂಟಪ ವಿಜಯನಗರದ ಶೈಲಿಯ ಒಂದು ವಿಶೇಷ. ಇದೊಂದು ತೆರೆದ ಮಂಟಪ. ಮಧ್ಯದಲ್ಲಿ ಎತ್ತರದ ವೇದಿಕೆ. ಇದರ ಮಧ್ಯದಲ್ಲಿ ಒಂದು ಪೀಠ. ದೇವಾಲಯದ ಉತ್ಸವ ವಿಗ್ರಹಗಳಿಗೆ ಕಲ್ಯಾಣೋತ್ಸವ ಮುಂತಾದ ಉತ್ಸವಗಳನ್ನು ನಡೆಸಿದಾಗ ಆ ವಿಗ್ರಹಗಳನ್ನು ಈ ಪೀಠದ ಮೇಲೆ ಕುಳ್ಳಿರಿಸ ಲಾಗುತ್ತಿತ್ತು. ಈ ಮಂಟಪಗಳಲ್ಲಿ ಸಂಯುಕ್ತ ಕಂಬಗಳನ್ನು ಅಳವಡಿಸಿ ಅವುಗಳನ್ನು ಬಳ್ಳಿಗಳು, ಪ್ರಾಣಿಗಳು, ಪಕ್ಷಿಗಳ ಚಿತ್ರಗಳಿಂದ ಅಲಂಕರಿಸಲಾಗು ತ್ತಿತ್ತು. ಶಿಲ್ಪಿಯ ಕೌಶಲವನ್ನು ಈ ಕೆತ್ತನೆಯ ಕೆಲಸಗಳಿಂದ ಅರಿತುಕೊಳ್ಳ ಬಹುದು. ಈ ಮಂಟಪಗಳ ತಳಪಾಯಗಳ ಪಟ್ಟಿಗಳಲ್ಲೂ ಇಂತಹುದೇ ಕೆತ್ತನೆ ಗಳು. ಈ ಮಂಟಪಕ್ಕೆ ಹೋಗಲು ಮೆಟ್ಟಿಲುಗಳಿದ್ದು ಅವುಗಳ ಪಕ್ಕದಲ್ಲಿ ಮಕರಗಳ, ಆನೆಗಳ ಶಿಲ್ಪಗಳು.

ದೇವಾಲಯದ ಸುತ್ತಲೂ ಪ್ರಕಾರದ ಗೋಡೆಗಳನ್ನೆಬ್ಬಿಸುವುದು ಈಗ ಸಾಮಾನ್ಯವಾಯಿತು. ಅಲ್ಲದೆ ಈ ಪ್ರಾಕಾರದೊಳಗೆ ಉಪಗುಡಿಗಳನ್ನು ಸಹ ಕಟ್ಟಲಾಯಿತು. ಸಾಮಾನ್ಯವಾಗಿ ದೇವಿಯ ಗುಡಿಗಳನ್ನು ನೈಋತ್ಯ ಮೂಲೆ ಯಲ್ಲಿ ಕಟ್ಟಲಾಗುತ್ತಿತ್ತು. ಶ್ರೀವೈಷ್ಣವರ ದೇವಾಲಯಗಳಲ್ಲಿ ಆಳ್ವಾರರುಗಳಿಗೂ ಆಚಾರ್ಯರಿಗೂ ಬೇರೆ ಬೇರೆ ಗುಡಿಗಳನ್ನು ರಚಿಸಲಾಗುತ್ತಿತ್ತು. ಈ ಆಳ್ವಾರರ ಆಚಾರ್ಯರ ಹುಟ್ಟುಹಬ್ಬ ಮುಂತಾದ ವಿಶೇಷ ಉತ್ಸವಗಳ ಆಚರಣೆಗಾಗಿ ಅರಸರು ಪ್ರತ್ಯೇಕವಾದ ಏರ್ಪಾಡುಗಳನ್ನು ಮಾಡಿದ್ದರು.

ಗೋಪುರಗಳ ರಚನೆ ವಿಜಯನಗರದ ಕಾಲದಲ್ಲಿ ವಿಶೇಷವಾಗಿ ಕರ್ನಾಟಕ ದಲ್ಲಿ ಹೊಸದಾಗಿ ಕಾಣಿಸಿಕೊಂಡ ಒಂದು ಬೆಳವಣಿಗೆ. ತಮಿಳುನಾಡಿನಲ್ಲಿ ಇದು ಆ ವೇಳೆಗಾಗಲೇ ಪರಿಚಯವಾಗಿತ್ತು. ಇದು ಎತ್ತರವಾದವು, ಗರ್ಭಗೃಹದ

ಮೇಲಿನ ವಿಮಾನಕ್ಕೆ ಪ್ರಾಶಸ್ತ್ಯ ಕಡಿಮೆಯಾಯಿತು. ಈ ವಿಮಾನದಲ್ಲಿ, ಮಂಟಪಗಳ ಹೊರಭಿತ್ತಿಗಳಲ್ಲಿ ದೇವಕೋಷ್ಠ (ಗೂಡು)ಗಳಲ್ಲಿ ಕಾಣಬರುತ್ತಿದ್ದ ಉಬ್ಬುಶಿಲ್ಪಗಳು ಕ್ರಮೇಣ ಗೋಪುರಗಳಲ್ಲಿ ಸ್ಥಾನವನ್ನು ಪಡೆದುವು. ಒಂದು ಮಟ್ಟದವರೆಗೆ ನಯವಾಗಿ ಕೆತ್ತಿದ ಕಲ್ಲುಗಳನ್ನು ಉಪಯೋಗಿಸಿ ಆ ಬಳಿಕ ಇಟ್ಟಿಗೆ ಮತ್ತು ಗಾರೆಗಳಿಂದ ಉಳಿದ ಭಾಗವನ್ನೂ ಎತ್ತರಿಸಲಾಯಿತು. ದಕ್ಷಿಣ ಭಾರತದಲ್ಲಿ ಗೋಪುರಗಳು ಸಾಮಾನ್ಯವಾಗಿ ಐದು ಅಂತಸ್ತುಗಳನ್ನು ಪಡೆದಿದ್ದು ಅನಂತರ ಅಂತಸ್ತುಗಳ ಸಂಖ್ಯೆ ಸಹ ಹೆಚ್ಚಿತು. ಕಾಂಚೀಪುರದ ಏಕಾಮ್ರನಾಥಾಲಯದ ಒಂಬತ್ತು ಅಂತಸ್ತುಗಳ ಗೋಪುರವನ್ನು ಕಟ್ಟಿಸಿದಾತ ಕೃಷ್ಣದೇವರಾಯ.

೩

ಈ ಮೇಲೆ ಹೇಳಿದ ವಿಷಯಗಳೆಲ್ಲ ವಿಜಯನಗರದ ಶೈಲಿಯ ಕೆಲವು ಮುಖ್ಯ ಲಕ್ಷಣಗಳು. ಹಂಪಿ (ಹಂಪೆ) ಇದರ ರಾಜಧಾನಿ. ಇದಕ್ಕೆ ಏಳು ಕೋಟೆಯ ಗೋಡೆಗಳಿದ್ದುವು. ಹೊರಗಿನ ಏಳನೆಯ ಕೋಟೆಯ ದಕ್ಷಿಣ ತುದಿ ಹೊಸಪೇಟೆಯ ದಕ್ಷಿಣಕ್ಕೆ ಮೂರು ಕಿಲೋಮೀಟರುಗಳ ದೂರದಲ್ಲಿತ್ತು. ಇನ್ನೊಂದು ಭಾಗ ಈಗಿನ ಮಲಪನಗುಡಿಯ ದಕ್ಷಿಣೋತ್ತರಗಳಲ್ಲಿ ಹಾದು ಹೋಗಿತ್ತು. ಆರನೆಯ ಕೋಟೆಯ ಗೋಡೆ ಕಮಲಾಪುರದ ಕೆರೆಯ ಉತ್ತರದ ಕಟ್ಟೆಯನ್ನು ಆವರಿಸಿ ಕದಿರಾಮಪುರವನ್ನು ದಾಟಿ ಉತ್ತರಾಭಿಮುಖವಾಗಿ ಮುಂದುವರೆದಿತ್ತು. ಉಳಿದ ಕೋಟೆಗಳಲ್ಲಿ ರಾಜಧಾನಿ ನಗರವನ್ನು ಆವರಿಸಿದ ಒಳಭಾಗದ ಮೊದಲ ಕೋಟೆಯ ಬಹುಭಾಗ ಇನ್ನೂ ಉಳಿದಿದೆ. ಇದರ ಹಲವು ಪ್ರವೇಶದ್ವಾರಗಳನ್ನೂ, ಬುರುಜುಗಳನ್ನೂ ಈಗಲೂ ಕಾಣಬಹುದು. ಆನೆಗೊಂದಿಯಿಂದ ನಗರಕ್ಕೆ ಬರುವಾಗ ತಳಾರಿಗಟ್ಟದಲ್ಲಿ ಕಾಣಸಿಗುವುದು ಉತ್ತರದ ದ್ವಾರ. ಇಲ್ಲಿ ಕೋಟೆಯ ತೆನೆಗಳ (ಮೇಲ್ಭಾಗ) ಕಮಾನುಗಳ ಅವಶೇಷಗಳಿವೆ. ಗುಂಬಜಿನ (ಗುಮ್ಮಟಾಕಾರದ)ದ್ವಾರ ೧೮ ಮೀಟರುಗಳಷ್ಟು ಎತ್ತರವಾಗಿದ್ದು, ಕಂಬಗಳ, ದ್ವಾರಗಳ ಕೆತ್ತನೆಯ ಕೆಲಸ ರಮ್ಯವಾಗಿದೆ. ನಾಲ್ಕು ಮಧ್ಯದ ಕಮಾನುಗಳುಳ್ಳ ಈ ಚೌಕಾಕಾರದ ದ್ವಾರದಲ್ಲಿ ಗಚ್ಚುಗಾರೆಯಲ್ಲಿ ಸುರುಳಿಗಳ ಅಲಂಕಾರವಿದೆ. ಇಂತಹ ಅಲಂಕಾರವನ್ನು ಕಮಾನಿನ ಮೂಲೆಗಟ್ಟುಗಳಲ್ಲೂ ಕಾಣಬಹುದಾಗಿದೆ. ಪಕ್ಕದಲ್ಲಿ ಕಂಬಗಳ ಕೈಸಾಲೆಯ ರೀತಿಯ ಕಾವಲುಗಾರರ ಕೊಠಡಿಯಿದೆ. ದ್ವಾರದ ಬಲಗಡೆ ಗೋಡೆಯ ಮೇಲೆ ಒಬ್ಬ ಅರಸನೊ

ಸಾಮಂತನೋ ಲಿಂಗವನ್ನು ಪೂಜಿಸುತ್ತಿರುವುದನ್ನು ನಿರೂಪಿಸುವ ಅರೆಯುಬ್ಬು ಚಿತ್ರವಿದೆ.

ಭೀಮನ ದ್ವಾರವೆನ್ನುವುದು ಇಂತಹುದೇ ಇನ್ನೊಂದು ಕೋಟೆಯ ಬಾಗಿಲು. ಮೇಲೆ ಹೇಳಿದ ಬುರುಜಿನ ಬಾಗಿಲಿಗೂ ಗಾಣಿಗಿತ್ತಿ ದೇವಾಲಯಕ್ಕೂ ನಡುವಣ ಈ ದ್ವಾರ ಲಭ್ಯವಿರುವ ದ್ವಾರಗಳಲ್ಲಿ ಭದ್ರವಾದುದೂ ಸ್ಥೂಲವಾದುದೂ ಆಗಿದೆ. ಇದರಲ್ಲಿಯೂ ಸಮಕೋನಗಳಲ್ಲಿ ಎರಡು ಬಾಗುಗಳು, ಎತ್ತರದ ಭಿತ್ತಿಗಳು, ಕಂಬಗಳಿರುವ ಮಂಟಪಗಳು, ಮೊಗಸಾಲೆಗಳು ಇವೆ. ಒಳ ಅಂಗಣದ ಬಲಗಡೆ ೧.೭ ಮೀಟರ್ ಎತ್ತರದ ಭೀಮನ ವಿಗ್ರಹವಿದೆ. ಪಕ್ಕದ ಗೋಡೆಗಳಲ್ಲಿ ಕೀಚಕನ ವಧೆಗೆ ಸಂಬಂಧಿಸಿದ ಕೆತ್ತಿದ ಚಿತ್ರಗಳಿವೆ.

ರಾಣೀವಾಸದ ಸ್ನಾನಗೃಹ ಸಿಂಹಾಸನ ಮಂಟಪದ ಆಗ್ನೇಯಕ್ಕೆ ಎತ್ತರವಾದ ಗೋಡೆಗಳಿಂದ ಆವೃತವಾದ ಚೌಕಾಕಾರದ ಕಟ್ಟಡ. ಮಧ್ಯೆ ೧೫ ಮೀಟರ್ ಚದರದ ೧.೮ ಮೀಟರ್ ಆಳದ ಈಜುಕೊಳವಿದೆ. ಅಲ್ಲಲ್ಲಿ ಮುಂದಕ್ಕೆ ಚಾಚಿದ ಮೊಗಸಾಲೆಗಳಿವೆ. ಎರಡೆರಡು ಮೊಗಸಾಲೆಗಳ ನಡುವೆ ಕಿಟಕಿಯಿದೆ. ಇವುಗಳ ಮೇಲಿನ ಭಾಗದಲ್ಲಿ ವಿವಿಧ ರೂಪಗಳ ಗಚ್ಚುಗಾರೆಯ ಕೆತ್ತನೆಗಳಿವೆ. ಈಜುಕೊಳಕ್ಕೆ ನೀರನ್ನು ಹೊರಗಿನ ಬಾವಿಗಳಿಂದ ಕಾಲುವೆಗಳಿಗೆ ನೀರು ಹರಿಸುವುದರ ಮೂಲಕ ತುಂಬಲಾಗುತ್ತಿತ್ತು. ಮಲಿನವಾದ ನೀರು ಬೇರೆ ಕಾಲುವೆಗಳಿಂದ ಹೊರಗೆ ಹೋಗುವ ಏರ್ಪಾಡಿತ್ತು. ಸಿಂಹಾಸನ ಮಂಟಪದ ದಕ್ಷಿಣಕ್ಕೆ ದಾರಿಯ ಪಕ್ಕದಲ್ಲಿ ಒಂದು ದೊಡ್ಡ ಕಲ್ಲಿನ ಬಾಗಿಲಿದೆ. ಒಂದೇ ಶಿಲೆಯಿಂದ ಕೆತ್ತಲಾದ ಈ ದ್ವಾರ ಯಾವ ಕಟ್ಟಡಕ್ಕೆ ಸಂಬಂಧಪಟ್ಟುದೆಂಬುದನ್ನು ಹೇಳಲಾಗದು. ಸಮೀಪದಲ್ಲಿಯೇ ದೊಡ್ಡ ತಟಾಕದಂತೆ ಕಾಣುವ ತೊಟ್ಟಿಯಿದೆ. ಗಾರೆಯಿಂದ ಕಟ್ಟಿದ ಈ ತೊಟ್ಟಿಯ ಒಳಗೆ ನೀರು ಹೋಗಲು, ಒಳಗಿನಿಂದ ನೀರು ಹೊರಗೆ ಹೋಗಲು ಕಲ್ಲಿನ ಕಾಲುವೆಗಳನ್ನು ಅಳವಡಿಸಲಾಗಿದೆ. ಇದಕ್ಕೆ ನೈಋತ್ಯದಲ್ಲಿ ಎಂಟು ಮೂಲೆಗಳ ಕಟ್ಟಡವೊಂದಿದ್ದು ಅದರ ಮಧ್ಯೆ ಕಾರಂಜಿಯ ಕಲ್ಲಿನ ತೊಟ್ಟಿ ಇದೆ. ಈ ಕಟ್ಟಡದ ಎರಡೂ ಕಡೆ ಬಾವಿಗಳಿದ್ದು ಬಹುಶಃ ಏತಗಳ ಮೂಲಕ ನೀರನ್ನೆತ್ತಿ ಕಾಲುವೆಗಳ ಮೂಲಕ ಈ ತೊಟ್ಟಿಗೆ ನೀರು ಹರಿಸುತ್ತಿದ್ದಿರಬಹುದು.

ಹಜಾರರಾಮಸ್ವಾಮಿ ದೇವಾಲಯದ ವಾಯುವ್ಯಕ್ಕೆ ರಾಣೀವಾಸ. ಒಳಗಿನ ಕಟ್ಟಡಗಳನ್ನು ಆವರಿಸಿದಂತೆ ಹೊರಗಡೆ ಎತ್ತರವಾದ ಗೋಡೆಗಳಿವೆ.

ಇದಕ್ಕೆ ಪ್ರವೇಶ ಪಶ್ಚಿಮದ ದ್ವಾರದಿಂದ. ಗೋಡೆಯು ಕೆಳಭಾಗ ಅಗಲವಾಗಿದ್ದು ಮೇಲೇರಿದಂತೆಲ್ಲ ಕಿರಿದಾಗುತ್ತ ಹೋಗಿದೆ. ಈ ಗೋಡೆಯ ಮೂರು ಮೂಲೆಗಳಲ್ಲಿ ಕಾವಲು ಗೋಪುರಗಳಿವೆ. ಈಗ ಈ ಕಾವಲು ಗೋಪುರಗಳಿಗೆ ಹೊಂದುವಂತೆ ಹೊಸದಾಗಿ ಗೋಡೆ ಕಟ್ಟಲಾಗಿದೆ. ಮೊದಲಿದ್ದ ಗೋಡೆ ಕಾಣಸಿಗದು. ವಾಸ್ತವಿಕವಾಗಿ ಇದನ್ನು ರಾಣೀವಾಸವೆನ್ನಲು ಹೆಚ್ಚಿನ ಆಧಾರಗಳಿಲ್ಲ. ಸಾಮಾನ್ಯವಾಗಿ ವಿಜಯನಗರದ ಅರಸರೊಬ್ಬೊಬ್ಬರಿಗೂ ಹಲವಾರು ರಾಣಿಯರಿರುತ್ತಿದ್ದರು. ಅವರುಗಳಿಗೆ ಅವರ ಸೇವಕಿಯರು ಮುಂತಾದವರ ವಾಸಕ್ಕೆ ಅಲ್ಲಿನ ಕಟ್ಟಡಗಳಾವುವೂ ಯೋಗ್ಯವಾಗಿಲ್ಲ. ಅರಮನೆ ಎನ್ನಬಹುದಾದ ಎರಡು ಕಟ್ಟಡಗಳ ತಳಪಾಯ ಮಾತ್ರ ಈಗ ಉಳಿದಿದೆ. ಜೊತೆಗೆ ಒಂದು ಕೊಳವೂ ಇದೆ. ಒಂದು ಕಟ್ಟಡದ ಮೂರು ಸಾಲುಗಳು ಬಹಳ ಹಿಂಜರಿದಂತೆ ಮತ್ತು ಉಬ್ಬಿದಂತೆ ತೋರುವ ತಳಹದಿ ಮಾತ್ರ ಲಭ್ಯವಾಗಿದ್ದು ಇದು ಒಬ್ಬ ರಾಣಿಯ ನಿವಾಸವೆಂದು ಹೇಳಲಾಗಿದೆ. ವಿಜಯನಗರದಲ್ಲಿ ಕಾಣಸಿಕೊಂಡಿರುವ ಇಂತಹ ನಿವಾಸಗಳ ಅವಶೇಷಗಳಲ್ಲಿ ೪೫.೭ ಮೀ. × ೨೮.೬ ಮೀ. ವಿಸ್ತಾರದ ಈ ತಳಪಾಯವೇ ಅತಿ ವಿಶಾಲವಾದುದು. ಸಮೀಪದಲ್ಲಿಯೇ ಸ್ತ್ರೀ ಕಾವಲುಗಾರರ ಮನೆಗಳೆಂದು ಹೇಳಲಾದ ಕಟ್ಟಡಗಳಿವೆ. ಪೂರ್ವಾಭಿಮುಖವಾಗಿರುವ ಈ ಕಟ್ಟಡದ ದ್ವಾರ ಹೊರತುಪಡಿಸಿದರೆ ಇತರ ಯಾವ ವಿಧವಾದ ಬಾಗಿಲುಗಳಾಗಲೀ ಕಿಟಕಿಗಳಾಗಲೀ ಇದಕ್ಕಿಲ್ಲ. ಅಷ್ಟೇನೂ ಎತ್ತರವಲ್ಲದ ಈ ಕಟ್ಟಡದ ಛಾವಣಿ ಸಮತಟ್ಟಾಗಿದೆ. ಒಳಗಿನ ಅಂಗಳದ ನಡುವೆ ಆಯಾಕಾರದ ಭಾಗವಿದ್ದು ನಾಲ್ಕೂ ಕಡೆ ಕಂಬಗಳಿವೆ. ಎತ್ತರವಾದ ಪೀಠದ ಅಂಚಿನಲ್ಲಿರುವ ಚೌಕಾಕಾರದ ಈ ಕಂಬಗಳಿಂದ ಕಮಾನುಗಳು ಹೊಮ್ಮಿದಂತೆ ಕಾಣುತ್ತವೆ. ಈ ಕಮಾನುಗಳು ಕಂಬಗಳು ಮೊಗಸಾಲೆಯನ್ನು ಸಣ್ಣ ಸಣ್ಣ ಭಾಗಗಳಾಗಿ ವಿಂಗಡಿಸಿವೆ. ಒಂದೊಂದು ಭಾಗದ ಮೇಲೂ ಗುಮ್ಮಟಾಕಾರದ ಛಾವಣಿ ಇದೆ. ಈ ಗುಮ್ಮಟಗಳು ಅಷ್ಟಕೋನ ಅಥವಾ ಕಮಾನಿನಂತೆ ಬಾಗಿದ ಆಕೃತಿಗಳು. ಕಂಬಗಳ ಮೇಲಿಂದ ಹೊರಟ ಪತ್ರವಿನ್ಯಾಸದ ಕಮಾನುಗಳು. ಮಧ್ಯದ ಆಯಾಕಾರದ ಭಾಗದ ಛಾವಣಿಯನ್ನು ಆವರಿಸಿವೆ. ಈ ಕಟ್ಟಡದ ಉಪಯೋಗ ಎಂತಹದಾಗಿತ್ತು ಎಂದು ಹೇಳಲಾಗದು. ಸ್ತ್ರೀ ಕಾವಲುಗಾರರ ವಾಸಸ್ಥಾನವೆಂದು ಪ್ರತೀತಿಯಿದ್ದರೂ, ಗಾಳಿ ಬೆಳಕುಗಳಿಲ್ಲದ ಇದು ವಾಸಯೋಗ್ಯವಲ್ಲ. ಬಹುಶಃ

ಇದೊಂದು ಉಗ್ರಾಣ ಅಥವಾ ಮದ್ದುಗುಂಡುಗಳನ್ನು ಶೇಖರಿಸುವ ಸ್ಥಳವಾಗಿದ್ದಿರಬಹುದು.

ಇಲ್ಲಿನ ಇನ್ನೊಂದು ಪ್ರಮುಖ ಕಟ್ಟಡ ಕಮಲ ಮಹಲ್. ಇದನ್ನು ಚಿತ್ರಾಂಗಿ ಮಹಲ್ ಎಂದು ಸಹ ಕರೆಯಲಾಗಿದೆ. ಇದು ಎರಡಂತಸ್ತುಗಳ ಒಂದು ಅಲಂಕಾರ ಮಂಟಪ. ವಾಸ್ತವಿಕವಾಗಿ ಚೌಕಾಕಾರದ ತಳಪಾಯ ಹೊಂದಿದ್ದರೂ ಪಕ್ಕಗಳೆಲ್ಲ ಹಿಂದಕ್ಕೆ ಸರಿದಿರುವುದರಿಂದ ಇದರ ವಿನ್ಯಾಸ ಕಮಲಾಕಾರವಾಗಿ ಕಂಡುಬಂದಿದೆ. ಕಲ್ಲಿನ ಅಲಂಕೃತ ಅಧಿಷ್ಠಾನದ ಮೇಲೆ ೨೪ ಚೌಕಾಕಾರದ ಕಂಬಗಳಿದ್ದು ಹಿಂಜರಿದ ಪತ್ರವಿನ್ಯಾಸದ ಕಮಾನುಗಳು ಅವುಗಳನ್ನು ಆಧರಿಸಿವೆ. ಮೊದಲು ಹೊರಭಾಗಗಳಲ್ಲಿ ಮೆದುಗಾರೆಯ ಅಲಂಕಾರಗಳಿದ್ದುವೆಂದು ತೋರುತ್ತದೆ. ಈಗ ನಮಗೆ ಕಾಣುವುದಿಲ್ಲ ಕಮಾನಿನ ಭುಜಕ್ಕೆ ಸೇರಿದ ತ್ರಿಕೋಣಾಕಾರದ ಸ್ಥಳದಲ್ಲಿನ ಪದಕಗಳ ಅವಶೇಷಗಳು ಮಾತ್ರ. ಅಗ್ರಭಾಗದಲ್ಲಿ ಸಿಂಹಮುಖಗಳಿವೆ. ಮೊದಲನೆಯ ಅಂತಸ್ತಿನ ಕಪೋತದಲ್ಲಿ ತುಸು ಬಾಗಿದ ಪುಷ್ಪವಿನ್ಯಾಸ. ಹೊರ ಮೂಲೆಗಳಲ್ಲಿ ಹೆಣ್ಣಿನಾಕಾರದ ಯಾಳಿಗಳಿದ್ದುವು. ಈಗ ಅವುಗಳಲ್ಲಿ ಒಂದು ಮಾತ್ರ ಉಳಿದಿದೆ. ಒಳಭಾಗದಲ್ಲಿ ಈಗ ಯಾವ ಅಲಂಕಾರವೂ ಕಂಡುಬರುವುದಿಲ್ಲ. ಕಂಬಗಳನ್ನು ಅಲಂಕೃತ ಕಮಾನುಗಳು ಕೂಡಿಸಿವೆ. ಮೂಲೆಗಳಲ್ಲಿನ ಕೆಳಭಾಗದ ಅಡ್ಡ ಕಮಾನುಗಳು ವಿಚಿತ್ರವಾಗಿವೆ. ಛಾವಣಿಯ ಮಧ್ಯ ಕಮಲದ ಮೊಗ್ಗು ಕೆಳಮುಖವಾಗಿದ್ದು ಸುತ್ತಲೂ ಗುಮ್ಮಟಗಳನ್ನು ಉಚಿತ ಪರಿಮಾಣಗಳಲ್ಲಿ ಕೂಡಿಸಲಾಗಿದೆ. ಕಟ್ಟಡದ ಉತ್ತರ ಭಾಗದಲ್ಲಿ ಮೇಲಿನ ಅಂತಸ್ತಿಗೆ ಹೋಗಲು ಮೆಟ್ಟಿಲುಗಳಿವೆ. ಅಲ್ಲಿ ಹಲವಾರು ಮೊಗಸಾಲೆಗಳು, ಹಿಂಜರಿತವುಳ್ಳ ಪತ್ರವಿನ್ಯಾಸದ ಕಿಡಕಿಗಳು. ಇದರ ಛಾವಣಿಯಲ್ಲೂ ಅಷ್ಟಕೋನಾಕಾರದ ಉಬ್ಬಿದ ಗುಮ್ಮಟಗಳ ಮಧ್ಯದಲ್ಲಿ ಛಾವಣಿ ಮೇಲೆ ಎದ್ದು ಒಳಭಾಗಕ್ಕೆ ಬೆಳಕು ಬೀಳುವಂತೆ ಅಳವಡಿಸಿದ ಕಿಟಕಿಗಳುಳ್ಳ ಕಟ್ಟಡವಿದ್ದು ಗಾರೆಯ ಕಮಾನುಗಳು, ಲತಾವಿನ್ಯಾಸಗಳು, ಪುಷ್ಪ ಬೋದಿಗೆಗಳು ಮತ್ತು ವಿಗ್ರಹಗಳನ್ನಿಡಲು ಗೂಡುಗಳು ಇವೆ. ಮಧ್ಯದಲ್ಲಿ ಕೆಳಮುಖವಾದ ಕಮಲದ ಗುಮ್ಮಟ. ಕಟ್ಟಡದ ಮೇಲೆ ಪಿರಮಿಡ್ಡಿನಾಕಾರದ ಛಿನ್ನಗಾತ್ರದ ಒಂಬತ್ತು ಶಿಖರಗಳು. ಇವು ಒಂದೊಂದೂ ತುಸು ಬಾಗಿದ ಕಪೋತಗಳಾಗಿ ಒಂದರ ಮೇಲೊಂದು ಕಿರಿದಾಗುತ್ತಾ ಹೋಗಿವೆ. ಮೇಲ್ಭಾಗ



ಹಂಪೆಯ ಕಮಲ ಮಹಲ್

ದಲ್ಲಿ ಅರೆಗೋಳವಿ ಮಾಡಿದ ಗುಮ್ಮಟಾಕಾರದ ಶಿಖರ. ಒಟ್ಟು ಕಟ್ಟಡವನ್ನು
ಯಾವ ದಿಕ್ಕಿನಿಂದ ನೋಡಿದರೂ ಒಂದೇ ರೀತಿಯಲ್ಲಿ ಕಾಣಿಸುತ್ತದೆ.

ಈ ಕಟ್ಟಡದ ಸಮೀಪದಲ್ಲಿ ಗಜಶಾಲೆ ಎನಿಸಿದ ಹನ್ನೊಂದು ಲಾಯದ
ಕೊಠಡಿಗಳಿವೆ. ಒಂದೊಂದರಲ್ಲೂ ಒಂದೊಂದು ಆನೆಯನ್ನು ಕಟ್ಟಿಹಾಕ
ಬಹುದಿತ್ತು. ಆನೆಗಳನ್ನು ಕಟ್ಟುವ ಯಾವ ವ್ಯವಸ್ಥೆಯೂ ಒಳಭಾಗದಲ್ಲಿಲ್ಲ
ದಿರುವ ಕಾರಣ ಇದನ್ನು ಗಜಶಾಲೆ ಎಂದು ಹೇಳುವುದನ್ನು ಹಲವರು
ಒಪ್ಪುವುದಿಲ್ಲ. ಆದರೆ ಕೊಠಡಿಯ ಛಾವಣಿಯ ಮೇಲಿಂದ ಕಬ್ಬಿಣದ ಸರಪಳಿ
ಗಳನ್ನು ತೂಗಿಬಿಟ್ಟು ಅವರಿಂದ ಆನೆಯನ್ನು ಕಟ್ಟುತ್ತಿದ್ದರೆಂಬ ರಜಾಕನ ಹೇಳಿಕೆ
ಯನ್ನು ಗಮನಿಸಿದರೆ ಇದು ಗಜಶಾಲೆಯೇ ಇರಬೇಕೆನಿಸುತ್ತದೆ. ಆದರೆ ರಜಾಕ್
ಗಜಶಾಲೆ ದಂಡನಾಯಕನ ಗೃಹದ ಮುಂದಿದ್ದಂತೆ ಸೂಚಿಸಿದ್ದಾನೆ. ಈ ಕೊಠಡಿ
ಗಳು ಒಂದಕ್ಕೊಂದು ಮಧ್ಯದ ಬಾಗಿಲಿನಿಂದ ಹೊಂದಿಕೊಂಡಿದ್ದುವು.
ಒಂದೊಂದು ಲಾಯದಮೇಲೂ, ಗುಮ್ಮಟಾಕಾರ, ಅಷ್ಟಕೋನಾಕಾರ
ಕೊಳವೆಯಿಂದ ಊದಿ ಉಬ್ಬಿಸಿದಂತೆ ಕಾಣುವ ಉಬ್ಬಿದ ಪಟ್ಟಿಯುಳ್ಳ ಭಿನ್ನ
ಭಿನ್ನ ಆಕಾರದ ಶಿಖರಗಳಿವೆ. ಒಂದೊಂದು ಲಾಯದ ಕೊಠಡಿಯ ಮಧ್ಯದ
ಭಾಗದ ಗೋಡೆಯಲ್ಲಿ ಕಮಾನು ಗೂಡುಗಳಿವೆ. ಲಾಯದ ದ್ವಾರ ಸಹ
ಕಮಾನಾಕಾರದ್ದೇ. ಒಳಗಿನ ಛಾವಣಿಯಲ್ಲಿ ಕಮಲದ ಅಲಂಕಾರ. ಈ ಲಾಯದ
ಕೊಠಡಿಗಳ ಮಧ್ಯದಲ್ಲಿ ಮೇಲಿನ ಅಂತಸ್ತಿಗೆ ಹೋಗಲು ಮೆಟ್ಟಲುಗಳಿವೆ.
ಮೇಲುಗಡೆ ಚೌಕಾಕಾರದ ತಿರುಗು ಬುರುಜಿದೆ. ಇದರ ಹೊರಮೈಯಲ್ಲಿ ಸಣ್ಣ
ಕಂಬಗಳನ್ನು ಕೂಡಿಸಲಾಗಿದೆ. ಇದರ ಶಿಖರ ಈಗ ಬಿದ್ದುಹೋಗಿದೆ.

ಮಹಾನವಮಿ ದಿಬ್ಬ ಹಂಪೆಯ ಪ್ರಸಿದ್ಧ ಅವಶೇಷಗಳಲ್ಲೊಂದು.
ಪೋರ್ಚುಗೀಸ್ ಯಾತ್ರಿಕನಾದ ಪೇ (Paes) ಇದನ್ನು ವಿಜಯಮಂದಿರವೆಂದು
ಕರೆದಿದ್ದಾನೆ. ಸಿಂಹಾಸನ ಮಂಟಪವೆಂದೂ ಇದನ್ನು ವರ್ಣಿಸಲಾಗಿದೆ. ಕೃಷ್ಣ
ದೇವರಾಯನ ಕಳಿಂಗದ ದಂಡಯಾತ್ರೆ ಯಶಸ್ವಿಯಾದ ಬಳಿಕ ಆ ವಿಜಯೋತ್ಸವ
ವನ್ನು ಆಚರಿಸಲೆಂದೇ ಇದನ್ನು ಕಟ್ಟಲಾಯಿತೆಂದು ಹೇಳಿದೆ. ಈಗ ಕಾಣುವದು
ಮೂರು ಸ್ತರಗಳುಳ್ಳ ವಿಶಾಲವಾದ ವೇದಿಕೆ ಮಾತ್ರ. ಒಂದೊಂದು ಸ್ತರದ
ಅಂಚಲ್ಲೂ ಗ್ರಾನೈಟ್ ಕಲ್ಲನ್ನು ಅಳವಡಿಸಿದ್ದು ಆ ಕಲ್ಲುಗಳಲ್ಲಿ ಅರಸನು ಸುಖ
ಸಂಕಥಾ ವಿನೋದದಲ್ಲಿ ಆಸ್ಥಾನದಲ್ಲಿ ಮಂಡಿಸಿರುವ ಮಂಡಲೀಕರು, ಸಾಮಂ
ತರು, ವಿದೇಶಗಳ (ಅರಬ್ ಇರಾನ್) ರಾಯಭಾರಿಗಳು ಅರಸನಿಗೆ ಗೌರವ

ಕಾಣಿಕೆಗಳನ್ನು ಸಲ್ಲಿಸುತ್ತಿರುವ ದೃಶ್ಯಗಳನ್ನು, ಆನೆ, ಕುದುರೆ, ಕಾಲಾಳುಗಳ ಮೆರವಣಿಗೆಯು, ನೃತ್ಯಗಳ, ಸಂಗೀತದ ಚಿತ್ರಗಳನ್ನು ಅದ್ಭುತವಾಗಿ ಕೊರೆಯಲಾಗಿದೆ. ಉತ್ತರಾಭಿಮುಖವಾಗಿರುವ ಈ ವೇದಿಕೆಯು ತಳಭಾಗ ಸುಮಾರು ೪೦ ಮೀಟರ್ ಚದರವಾಗಿದ್ದು ಮೇಲಿನ ಸ್ತರ ೨೪ ಚದರ ಮೀಟರುಗಳಷ್ಟಿದೆ. ಒಟ್ಟು ಎತ್ತರ ಸುಮಾರು ೧೨ ಮೀಟರುಗಳು. ಮೇಲೆ ಹೋಗಲು ಪಶ್ಚಿಮ ಭಾಗದಲ್ಲಿ ಮೆಟ್ಟಿಲುಗಳಿವೆ. ಉತ್ಸವಸಮಾರಂಭಗಳಲ್ಲಿ ಅರಸನು ಈ ಮೆಟ್ಟಿಲುಗಳನ್ನೇರಿ ವೇದಿಕೆಗೆ ಬರಬೇಕಾಗಿತ್ತು. ಪೂರ್ವದ ಕಡೆ ವೇದಿಕೆಯಿಂದ ಹೊರಬಿದ್ದಂತೆ ತೋರುವ ಒಂದು ಸಣ್ಣ ಕೊಠಡಿ ಇದೆ, ಇದರೊಳಗೆ ಇಳಿದು ಮೇಲೇರಿ ಬರಲು ಮೆಟ್ಟಿಲುಗಳಿವೆ. ಒಳಗಿನ ಗೋಡೆಯ ಮೇಲೆ ಪ್ರಾಣಿಗಳ ವಿದೂಷಕರ ಶಿಲ್ಪಗಳ ಪಟ್ಟಿಗಳಿವೆ. ಹೆಣೆದ ಜಡೆಯ, ಶಂಕುವಿನಾಕಾರದ ಟೋಪಿಗಳನ್ನು ಧರಿಸಿದಂತೆ ಇಲ್ಲಿ ಚಿತ್ರಿತರಾದ ಕೆಲವರು ಚೀನಾ ದೇಶದ ರಾಯಭಾರಿಗಳೆಂದು ಹಲವರು ಊಹಿಸಿದ್ದಾರೆ. ಪಂಚಪಾಂಡವರ ಚಿತ್ರಗಳು ಇಲ್ಲಿವೆ ಎಂಬುದು ಇನ್ನೊಂದು ಊಹೆ. ಬಹುಶಃ ಇವೆಲ್ಲ ವೀರಯೋಧರ ಚಿತ್ರಗಳಾಗಿರಬಹುದು. ಈ ದಿಬ್ಬದ ಮೇಲೆ ಕಂಬಗಳನ್ನು ಕೂಡಿಸಿ ವರ್ಣರಂಜಿತವಾದ ಮಂಟಪವನ್ನು ನಿರ್ಮಿಸಲಾಗಿತ್ತೆಂದು ತೋರುತ್ತದೆ. ಅವೆಲ್ಲ ಬಹುಶಃ ಮರಗೆಲಸಗಳಾಗಿದ್ದು ಈಗ ದಿಬ್ಬದ ವೇದಿಕೆ ಹೊರತು ಇನ್ನೇನೂ ಉಳಿದಿಲ್ಲ.

ಸಮೀಪದಲ್ಲಿ ರಾಜನ ಅರಮನೆಯದೆಂದು ಹೇಳಲಾದ ೨೭ಮೀ. × ೧೮ ಮೀ. × ೧.೫ ಮೀ. ಅಳತೆಯ ಅಸ್ತಿಭಾರವಿದೆ. ಇದಕ್ಕೆ ರಾಜಧಾನಿಯಲ್ಲಿನ ಉತ್ಸವಗಳ, ಗಜ ತುರಗ ಪದಾತಿಗಳ ಸಮೂಹದ ಸುಂದರವಾಗಿ ಕೆತ್ತಲಾದ ಹಸಿರು ಶಿಲೆಯನ್ನು ಹೊಂದಿಸಲಾಗಿದೆ. ಒಳಭಾಗದ ಗೋಡೆಗಳು ಇಟ್ಟಿಗೆಗಳಿಂದ ಕಟ್ಟಲ್ಪಟ್ಟುವೆಂಬುದು ಭಿನ್ನ ಅವಶೇಷಗಳಿಂದ ತಿಳಿದುಬರುತ್ತದೆ. ಇದಕ್ಕೆ ವಾಯುವ್ಯದಲ್ಲಿ ಭೂಮಿಯಲ್ಲಿ ಸುರಂಗವನ್ನು ಕೊರೆದು ಕಟ್ಟಿದ ರಹಸ್ಯಮಂದಿರವಿದೆ. ಚೌಕಾಕಾರದ ಕೊಠಡಿಯ ಸುತ್ತಲೂ ಕಂಬಗಳುಳ್ಳ ಮುಚ್ಚಿದ ಪ್ರದಕ್ಷಿಣಾ ಪಥವಿದೆ. ಒಳಗೆ ಇಳಿದು ಬರಲು ಸೋಪಾನಗಳಿವೆ. ಗುಪ್ತ ಸಮಾಲೋಚನೆಗಳಿಗಾಗಿ ಈ ಮಂದಿರವನ್ನು ಉಪಯೋಗಿಸಲಾಗುತ್ತಿತ್ತೆಂಬುದು ಪ್ರತೀತಿ. ಇದರ ಸಮೀಪದಲ್ಲಿಯೇ ಇತ್ತೀಚೆಗೆ ಹಸಿರು ಶಿಲೆಯಲ್ಲಿ ಕಡೆದ ಭಗ್ನವಾದ ವೇಣುಗೋಪಾಲನ ವಿಗ್ರಹ ಹಾಗೂ ಮೆಟ್ಟಿಲುಗಳುಳ್ಳ ಯಾಳಿಯ ಕಟಾಂಜನ ದೊರಕಿದ್ದು, ಬಹುಶಃ ಇದೊಂದು ದೇವಾಲಯವಾಗಿದ್ದಿರಬಹುದೆಂಬ ಊಹೆಗೆ

ಇದು ಎಡೆಮಾಡಿಕೊಡುತ್ತದೆ. ಸಮೀಪದಲ್ಲಿಯೇ ಆಸ್ಥಾನ ಮಂಟಪ, ವಿಜಯ ನಗರದಲ್ಲಿ ಲಭ್ಯವಿರುವ ಅತಿ ಎತ್ತರದ ಕಟ್ಟಡವಿದೆಂದು ರಜಾಕ್ ಹೇಳಿದ್ದಾನೆ. ಇದೊಂದು ಸಭಾ (ಆಸ್ಥಾನ) ಮಂಟಪವಾಗಿದ್ದು ರಾಜಸಭೆಗಳೆಲ್ಲವೂ ಇಲ್ಲಿ ನಡೆಯುತ್ತಿದ್ದುವೆನ್ನಬಹುದು. ಈಗ ಕಾಣುವುದು ಕೇವಲ ತಳಪಾಯ ಮರದ ಕಂಬಗಳನ್ನು ನಿಲ್ಲಿಸಿದ್ದರೆನ್ನಲು ಕುರುಹಾಗಿ ಸಾಲು ಸಾಲಾಗಿ ಕಂಬಗಳನ್ನು ನೆಡಲು ಬೇಕಾದ ಕುಳಿಗಳುಳ್ಳ ಕಲ್ಲಿನ ಪೀಠಗಳು ಈಗಲೂ ಇವೆ. ಇದು ನೂರು ಕಂಬಗಳ ಮಂಟಪವಾಗಿದ್ದಿರಬೇಕು. ಪೂರ್ವ–ಪಶ್ಚಿಮ ತುದಿಗಳಲ್ಲಿ ಮೇಲೇರಿ ಬರಲು ಮೆಟ್ಟಿಲುಗಳಿವೆ. ಉತ್ತರಾಭಿಮುಖವಾಗಿರುವ ಈ ಕಟ್ಟಡದ ಹಿಂಬದಿ ಯಲ್ಲಿ ಈಗಿನ ತಳಪಾಯಕ್ಕಿಂತ ನಾಲ್ಕೂವರೆ ಮೀಟರು ಎತ್ತರದ ಸೋಪಾನ ಗಳಿವೆ. ಇದು ಮಂಟಪದ ಮೇಲಂತಸ್ತಿಗೆ ರಾಣೀವಾಸದ ಸ್ತ್ರೀಯರು ಹೋಗಲು ಮಾಡಿದ ಏರ್ಪಾಡಾಗಿರಬಹುದು. ಈ ಮಂಟಪದ ಮುಂದೆ ಏಕಶಿಲೆಯಲ್ಲಿ ಮಾಡಲಾದ ಮೂರು ಮೀಟರ್ ಆಳ, ೧೨.೫ ಮೀಟರ್ ಉದ್ದದ ಕಲ್ಲಿನ ತೊಟ್ಟಿ ಇದೆ. ಸಿಂಹಾಸನ ಮಂಟಪದ ಬಳಿ ಕಲ್ಲಿನ ತೆರೆದ ಕಾಲುವೆಗಳನ್ನು ಕಾಣಬಹುದು. ರಾಜಧಾನಿಗೆ ನೀರು ಸರಬರಾಜು ಮಾಡಲು ಮಾಡಿದ್ದ ವಿಶಿಷ್ಟ ಏರ್ಪಾಡಿಗೆ ಇವು ಸಾಕ್ಷಿ. ಹಲವು ಕಡೆ ಇಂತಹ ಕಾಲುವೆಗಳನ್ನು ಎತ್ತರದ ಕಲ್ಲಿನ ಕಂಬಗಳ ಮೇಲೆ ನಿಲ್ಲಿಸಲಾಗಿತ್ತು. ನಗರದ ಸುತ್ತಲೂ ಈ ವಿಧದ ಕಾಲುವೆಗಳನ್ನು ಈಗಲೂ ಭಗ್ನಾವಸ್ಥೆಯಲ್ಲಿ ಕಾಣಬಹುದು.

ಕಮಲಾಪುರದಿಂದ ಹಂಪೆಗೆ ಹೋಗುವ ಮಾರ್ಗದಲ್ಲಿ ಪಾತಾಳ ಶಿವಾ ಲಯವಿದೆ. ಪೂರ್ವಾಭಿಮುಖವಾಗಿರುವ ಈ ಆಲಯ ನೆಲಮಟ್ಟದಿಂದ ಬಹಳ ಕೆಳಗಿರುವ ಕಾರಣ ಈ ಹೆಸರನ್ನು ಪಡೆದಿದೆ. ದೇವಾಲಯಕ್ಕೆ ಇಳಿದುಹೋಗಲು ಮೆಟ್ಟಿಲುಗಳಿವೆ. ಇಲ್ಲಿನ ಮಂಟಪವೊಂದರಲ್ಲಿರುವ ಶಾಸನದಲ್ಲಿ ಕೃಷ್ಣದೇವ ರಾಯನು ತನ್ನ ಪಟ್ಟಾಭಿಷೇಕೋತ್ಸವ ಸಮಯದಲ್ಲಿ ಪ್ರಸನ್ನ ವಿರೂಪಾಕ್ಷ ದೇವರಿಗೆ ಮಾಡಿದ ದಾನದ ಪ್ರಸ್ತಾಪವಿದೆ. ಇದನ್ನಾಧರಿಸಿ ಈ ಆಲಯ ಪ್ರಸನ್ನ ವಿರೂಪಾಕ್ಷನದಾಗಿತ್ತೆಂದು ಊಹಿಸಬಹುದು. ರಾಜಧಾನಿಯ ಮುಖ್ಯ ದೇವಾ ಲಯವಾದ ವಿರೂಪಾಕ್ಷ ದೇವಾಲಯಕ್ಕಿಂತ ಭಿನ್ನವಾದ ಆಲಯವಾಗಿರಬಹುದು. ಗರ್ಭಗೃಹದ ಅಕ್ಕದ ಸುತ್ತಲೂ ಮಂಟಪಗಳಿವೆ. ಪೂರ್ವದ ತುದಿಯಲ್ಲಿರುವ ಮಹಾಮಂಟಪದಲ್ಲಿ ಏಳುಸಾಲಿನ ಕಂಬಗಳಿವೆ. ನಿಡಿದಾದ ಧ್ವಜಸ್ತಂಭ ಛಾವಣಿಯ ಮಧ್ಯದಿಂದ ಹೊಮ್ಮಿದೆ. ಈ ಮಂಟಪದ ಉತ್ತರ ಮತ್ತು ದಕ್ಷಿಣ

ಗಳಲ್ಲಿ ಘನಾಕೃತಿಯ ಕಂಬಗಳುಳ್ಳ ಮೊಗಸಾಲೆಯ ಅವಶೇಷಗಳಿವೆ. ಗರ್ಭಗೃಹ ಮತ್ತು ಇತರ ಮಂಟಪಗಳಲ್ಲಿ ಎಲ್ಲ ಕಾಲದಲ್ಲೂ ಈಗ ನೀರು ನಿಂತಿರುತ್ತದೆ. ಗರ್ಭಗೃಹದ ಮತ್ತು ಅಂತರಾಳಗಳ ಸುತ್ತ ಮುಚ್ಚಿದ ಪ್ರಾಕಾರವಿದೆ. ಇಲ್ಲಿ ಬಳಸಲಾದ ಘನಾಕೃತಿಯ ಕಂಬಗಳು ಪ್ರಾಚೀನ ಶೈಲಿಯವಾಗಿದೆ. ಘನಾಕಾರದ ಅಡಿ, ಅಷ್ಟಕೋನದ ದಿಂಡು, ಸಿಡಿದಾದ ಚೂಪಾದ ಕುಂಭ ಇವುಗಳ ಲಕ್ಷಣಗಳು. ದೇವಿಯ ಗುಡಿ ಪ್ರತ್ಯೇಕವಾಗಿದೆ. ಇದು ಈಗ ಭಗ್ನವಾಗಿದೆ. ಕಲ್ಯಾಣ ಮಂಟಪ ಮಾತ್ರ ವಿಜಯನಗರದ ಶೈಲಿಯದು.

ಈ ಶಿವಾಲಯಕ್ಕೆ ಪೂರ್ವದಲ್ಲಿ ದಣ್ಣಾಯಕ (ದಂಡನಾಯಕ)ನ ಕೋಟೆ ಎಂದು ಕರೆಸಿಕೊಳ್ಳುವ ವಿಶಾಲವಾದ ಆವರಣವಿದೆ. ಸುತ್ತಲೂ ಪ್ರಾಕಾರದ ಗೋಡೆಗಳಿಂದಾವೃತವಾದ ಈ ಕೋಟೆಯೊಳಗೆ ಬಹುಶಃ ಹಲವಾರು ಸಣ್ಣ ಕಟ್ಟಡಗಳಿದ್ದುವು. ಈಗ ಅವುಗಳ ಅವಶೇಷವಾಗಿ ಕೆಲವು ಗೋಡೆಗಳ ಭಾಗಗಳು ಮಾತ್ರ ಉಳಿದಿವೆ. ಈಶಾನ್ಯದ ಮೂಲೆಯಲ್ಲಿ ಮೂರು ಸ್ತರಗಳಲ್ಲಿನ ಅಲಂಕೃತವಾದ ಅಧಿಷ್ಠಾನವನ್ನು ಕಾಣಬಹುದು. ಈ ಸ್ತರಗಳು ಎತ್ತರವಾದ ವೇದಿಕೆಗಳಂತಿದ್ದು ಅವುಗಳನ್ನು ಸಭಾಮಂಟಪಗಳಾಗಿ ಮಾರ್ಪಡಿಸಲು ಸಾಧ್ಯವಾಗುತ್ತಿತ್ತು. ನೈಋತ್ಯದ ಮೂಲೆಯಲ್ಲಿ ಮೂರು ಕಡೆಗಳಲ್ಲಿ ಮುಚ್ಚಿದ ಎತ್ತರದ ಕಂಬಗಳನ್ನುಳ್ಳ ಅಂಗಳವೊಂದಿದೆ. ಚೌಕಾಕಾರದ ಕಂಬಗಳಿಂದ ಕಮಾನುಗಳು ಚಿಮ್ಮಿವೆ, ಛಾವಣಿಯಲ್ಲಿ ತಲೆಕೆಳಗಾದ ಕಮಲದ ಒಂಬತ್ತು ಗುಮ್ಮಟಗಳಿವೆ. ಇಮ್ಮಡಿ ದೇವರಾಯನು ಸಮರ್ಥ ಅಶ್ವಾರೋಹಿಗಳಾದ ಮಹಮ್ಮದೀಯರನ್ನು ಸೈನ್ಯದಲ್ಲಿ ಸೇರಿಸಿಕೊಂಡು ಅವರಿಗಾಗಿ ಮಸೀದಿಯನ್ನು ಕಟ್ಟಿಸಿದನೆಂಬುದು ಫಿರಿಸ್ತಾನ ಹೇಳಿಕೆ. ಈ ಅಂಗಳದಂತಹ ಕಟ್ಟಡವೇ ಆ ಮಸೀದಿಯೆಂದು ಹಲವರ ಅಭಿಪ್ರಾಯ. ವಾಸ್ತವವಾಗಿ ಕಮಾನಿನ ಶೈಲಿಯನ್ನು ಹೊರತುಪಡಿಸಿದರೆ ಮಸೀದಿಗಳಿಗಿರಬೇಕಾದ ಯಾವ ಲಕ್ಷಣವೂ ಇಲ್ಲಿ ಕಾಣಬರದು. ತಳಪಾಯದಲ್ಲಿ ಹಿಂದೂಶಿಲ್ಪಗಳು ಉದುರಿಹೋದ ಗಾರೆಗಳ ಮೂಲಕ ಕಾಣಿಸಿಕೊಂಡಿವೆ. ಅದ್ದರಿಂದ ಇದನ್ನು ಮಸೀದಿ ಎನ್ನಲಾಗದು.

ಈ ಕೋಟೆಯೊಳಗೆ ರಾಜ್ಯದ ಆಡಳಿತಕ್ಕೆ ಸಂಬಂಧಿಸಿದ ಕಚೇರಿಗಳಿದ್ದಿರಬಹುದು. ಸುತ್ತಲೂ ಕಾವಲು ಗೋಪುರಗಳನ್ನು ಕಟ್ಟಲಾಗಿತ್ತು. ಈಗ ಇವುಗಳಲ್ಲಿ ಎರಡು ಮಾತ್ರ ಭಗ್ನಾವಸ್ಥೆಯಲ್ಲಿ ಉಳಿದಿವೆ. ವಾಯುವ್ಯದಲ್ಲಿರುವ ಇಂತಹ ಒಂದು ಗೋಪುರ ಕಲ್ಲಿನ ಕಟ್ಟಡ. ಕೆಳಗಡೆ ಒಂದು ಸಣ್ಣ ಕೋಣೆ.

ದಕ್ಷಿಣ ಮೂಲೆಯಲ್ಲಿ ಮೇಲಕ್ಕೆ ಹೋಗಲು ಮೆಟ್ಟಿಲುಗಳಿವೆ. ಗೋಪುರದ ಮೇಲ್ಭಾಗದಲ್ಲೂ ಒಂದು ಕೊಠಡಿ ಇದ್ದು ಮೂರು ಭಾಗಗಳಾಗಿ ವಿಂಗಡಿಸಲಾಗಿದೆ. ನಗರದ ಒಳಗೆ ಬರುವ-ಹೋಗುವ, ಮಿತ್ರರ-ಶತ್ರುಗಳ ಚಲನ ವಲನವನ್ನು ಈ ಗೋಪುರದ ಮೂಲಕ ಗಮನಿಸಬಹುದಾಗಿತ್ತು.

ಈ ಕೋಟೆಯ ಎಡಭಾಗದಲ್ಲಿ ನಾಣ್ಯಗಳನ್ನು ಅಚ್ಚು ಹಾಕುವ ಟಂಕಸಾಲೆ ಯಿದ್ದಿತೆಂದು ರಜಾಕ್ ಹೇಳಿದ್ದಾನೆ. ಇಲ್ಲಿರುವ ದಿಬ್ಬಗಳಲ್ಲಿ ಎತ್ತರವಾದುದು ಬಹುಶಃ ಅರಸನ ವಾಸಸ್ಥಾನವಾಗಿದ್ದು, ಇತರ ಸಣ್ಣ ದಿಬ್ಬಗಳು ರಾಣಿಯರ ನಿವಾಸಗಳಾಗಿದ್ದಿರಬಹುದು. ಇಲ್ಲಿ ಇನ್ನೂ ಉತ್ಖನನ ಕಾರ್ಯ ಕೈಗೊಂಡಲ್ಲಿ ಹೊಸ ವಿಷಯಗಳು ಗೋಚರಿಸಬಹುದು. ಅರಸನ ವಾಸಸ್ಥಾನದ ಹಿಂಬದಿಯಲ್ಲಿ ಗೋಡೆಗಳಿಂದಾವರಿಸಲ್ಪಟ್ಟ ಒಂದು ಆವರಣವಿದ್ದು ಬಹುಶಃ ಇಲ್ಲಿ ಅರಸನ ಖಜಾನೆ ಇದ್ದಿರಬಹುದು. ಆದರೆ ಈ ವಿಷಯಗಳಲ್ಲಿ ಖಚಿತವಾಗಿ ಏನನ್ನೂ ಹೇಳಲು ಸಾಧ್ಯವಿಲ್ಲ.

ಅಚ್ಯುತರಾಯನ ಗುಡಿಗೆ ಸಮೀಪದಲ್ಲಿ ತುಂಗಭದ್ರಾನದಿಯ ತೀರ ದಲ್ಲಿರುವ ತುಲಾಭಾರಸ್ತಂಭ ಸಹ ಇಲ್ಲಿ ಉಲ್ಲೇಖನಾರ್ಹ. ಸುಮಾರು ಹನ್ನೆರಡು ಅಡಿಗಳ ಅಂತರದಲ್ಲಿ ಎರಡು ಕಡೆ ಸುಮಾರು ೧೫ ಅಡಿಗಳಷ್ಟು ಎತ್ತರವಾದ ಕಂಬಗಳನ್ನು ನಿಲ್ಲಿಸಿ ಅವುಗಳ ತುದಿಗಳ ಮೇಲೆ ತೊಲೆಯೊಂದನ್ನು ಕೂಡಿಸ ಲಾಗಿದ್ದು, ಈ ತೊಲೆಯ ಕೆಳಗೆ ತಕ್ಕಡಿಗಳನ್ನು ತೂಗು ಹಾಕಲು ಮೂರು ಉಂಗುರಗಳಿವೆ. ಈ ಕಲ್ಲಿನ ಕಂಬಗಳು ಪೂರ್ಣಕುಂಭ, ಪುಷ್ಪಹಾರಗಳಿಂದ ಅಲಂಕೃತವಾಗಿವೆ. ಒಂದು ಕುಂಭದ ಕೆಳಗೆ ಮಕುಟಧಾರಿಯಾದ ಅರಸನ ಹಾಗೂ ಆತನ ಇಬ್ಬರು ಅರಸಿಯರ ಉಬ್ಬುಚಿತ್ರಗಳಿವೆ. ಇದನ್ನು ಕೃಷ್ಣದೇವ ರಾಯ ಮತ್ತು ಆತನ ಇಬ್ಬರು ಪತ್ನಿಯರ ಚಿತ್ರಗಳೆಂದು ಹೇಳಲಾಗಿದೆ. ತುಲಾ ಪುರುಷ ಮಹಾದಾನ ಈ ಅರಸರು ಸಾಮಾನ್ಯವಾಗಿ ಮಾಡುತ್ತಿದ್ದ ದಾನಗಳಲ್ಲಿ ಒಂದು. ತಕ್ಕಡಿಯ ಒಂದು ಕಡೆ ಅರಸನನ್ನು ಕೂಡಿಸಿ ಮತ್ತೊಂದರಲ್ಲಿ ಅವನ ತೂಕದ ಸುವರ್ಣ, ವಜ್ರವೈಡೂರ್ಯಗಳನ್ನು ತೂಗಿ ದಾನಮಾಡುವ ಈ ಸಮಾರಂಭಕ್ಕಾಗಿ ತುಲಾಭಾರಸ್ತಂಭವನ್ನು ನಿಲ್ಲಿಸಲಾಗಿತ್ತು.

ಇದುವರೆವಿಗೂ ಲೌಕಿಕ ವಾಸ್ತುಶಿಲ್ಪವನ್ನು ಕುರಿತು ವಿವೇಚಿಸಿದೆವು. ಇನ್ನು ದೇವಾಲಯಗಳು ಹಾಗೂ ಮೂರ್ತಿಶಿಲ್ಪಗಳನ್ನು ಪರಿಶೀಲಿಸೋಣ.

ವಿಜಯನಗರದ ಅರಸರ ಕುಲದೈವ ವಿರೂಪಾಕ್ಷ. ಈ ಹಂಪೆಯ ಅಧಿಪತಿ ಪಂಪಾಪತಿ. ಪಂಪಾ ಎಂಬಾಕೆ ಬ್ರಹ್ಮನ ಮಾನಸಪುತ್ರಿ. ಶಿವನನ್ನು ಒಲಿದು, ನಿಷ್ಠೆಯಿಂದ ತಪಸ್ಸನ್ನು ಮಾಡಿ. ಆತನಿಂದ ಅನುಗ್ರಹಿತಳಾಗಿ ಆತನನ್ನೇ ಮದುವೆಯಾದಳು. ಎಂತಲೇ ಆ ಪಂಪಾಂಬಿಕೆಯ ಪತಿ ಪಂಪಾಪತಿ ಎನಿಸಿದ ವಿರೂಪಾಕ್ಷ. ಈ ದೇವನ ಗುಡಿ ವಿರೂಪಾಕ್ಷಾಲಯ. ವಿಶಾಲವೂ, ಭವ್ಯವೂ ಆದ ಈ ದೇವಾಲಯದಲ್ಲಿ ವಿಜಯನಗರದ ಅರಸರ ಕಾಲಕ್ಕೂ ನಾಲ್ಕಾರು ಶತಮಾನಗಳ ಹಿಂದಿನ ಗುಡಿಗೋಪುರಗಳಿವೆ. ಅವುಗಳಿಗೆ ಮಂಟಪಗಳನ್ನು ಸೇರಿಸಿದ ಆವರಣದೊಳಗೇ ಇತರ ಗುಡಿಗಳನ್ನು ಕಟ್ಟಿಸಿದ ಖ್ಯಾತಿ ವಿಜಯನಗರದ ಅರಸರದು.

ಪಂಪಾಕ್ಷೇತ್ರದ ಪ್ರಾಚೀನ ಉಲ್ಲೇಖ ಬಾದಾಮಿಯ ಚಾಲುಕ್ಯರ ಅರಸನಾದ ವಿನಯಾದಿತ್ಯನ ತಾಮ್ರ ಶಾಸನದಲ್ಲಿದೆ. ಈ ಅರಸರ ಕ್ರಿ.ಶ. ೬೮೯ರಲ್ಲಿ ಪಂಪಾತೀರ್ಥದ ನೆಲೆವೀಡಿನಲ್ಲಿದ್ದಾಗ ಬ್ರಾಹ್ಮಣರಿಗೆ ಭೂದಾನಮಾಡಿದನೆಂದು ಶಾಸನದಲ್ಲಿ ಹೇಳಿದೆ. ಇದೇ ಚಾಲುಕ್ಯ ಮನೆತನದ ಆರನೆಯ ವಿಕ್ರಮಾದಿತ್ಯ ಕ್ರಿ.ಶ. ೧೦೧೮ನೆಯ ಶಾಸನವೊಂದರಲ್ಲಿ ಪಂಪಾಪತಿ ಎನಿಸಿದ ಮಹಾಕಾಳನಿಗೆ ಪಲ್ಲವ ವಂಶದ ವೃದ್ಧಮಬ್ಬರಸಿ ಎಂಬಾಕೆ ಭೂದಾನಮಾಡಿದಳೆಂದಿದೆ. ಅಂದು ಪಂಪಾಪತಿಗೆ ಮಹಾಕಾಲನೆಂಬ ಹೆಸರಿದ್ದಿತೆಂದು ಇದರಿಂದ ತಿಳಿದುಬರುತ್ತದೆ. ಕ್ರಿ.ಶ. ೧೧೯೯ನೆಯ ವರ್ಷದಲ್ಲಿ ಹುಟ್ಟಿದ ನಾಗವಂಶದ ಅರಸನಾದ ಕಲಿದೇವನ ಕಾಲದ ಶಾಸನದಲ್ಲಿ ಈ ದೇವರನ್ನು ವಿರೂಪಾಕ್ಷನೆಂದೂ, ದೇವಿಯನ್ನು ಪಂಪಾ ದೇವಿಯೆಂದೂ ಕರೆಯಲಾಗಿದೆ. ವಿರೂಪಾಕ್ಷಾಲಯದಲ್ಲಿ ಗರ್ಭಗೃಹದ ಎಡ ಭಾಗಕ್ಕೆ ಭುವನೇಶ್ವರಿಯ ಗುಡಿ ಇದೆ. ಇದು ಶಾಸ್ತ್ರೋಕ್ತವಾಗಿ ಗರ್ಭಗೃಹಕ್ಕೆ ಸಮರೇಖೆಯಲ್ಲಿಲ್ಲದೆ ಒಂದು ಮೂಲೆಯಲ್ಲಿರುವುದನ್ನು ಗಮನಿಸಿದರೆ ವಿರೂ ಪಾಕ್ಷಾಲಯ ಜೀರ್ಣವಾಗಿದ್ದು, ಕಾಲಾನಂತರ ಇದನ್ನು ಜೀರ್ಣೋದ್ಧಾರ ಗೊಳಿಸಲಾಯಿತೆಂದು ಊಹಿಸಬಹುದು. ಭುವನೇಶ್ವರಿ ಗುಡಿಯಲ್ಲಿ ಹೊಳಪಾದ ಕಪ್ಪು ಶಿಲೆಯ ಅಲಂಕೃತ ದ್ವಾರಬಂಧಗಳು ಇವೆ. ಇವೆಲ್ಲ ಚಾಲುಕ್ಯ ಶೈಲಿಯ



ಹಂಪೆಯ ವಿರೂಪಾಕ್ಷ ದೇವಾಲಯದ ಮಹಾದ್ವಾರ ಗೋಪುರ

ಲಕ್ಷಣಗಳನ್ನೊಳಗೊಂಡಿದ್ದು, ಬಹುಶಃ ಈ ಗುಡಿ ೧೧-೧೨ನೇ ಶತಮಾನಗಳಲ್ಲಿ ಕಟ್ಟಲಾದ ಆಲಯವಿರಬೇಕೆನಿಸುತ್ತದೆ.

ವಿರೂಪಾಕ್ಷಾಲಯದ ಗರ್ಭಗುಡಿಗೆ ಹೊಂದಿದಂತೆ ಕ್ರಮವಾಗಿ ಅಂತರಾಳ, ಅರ್ಧಮಂಟಪ ಮತ್ತು ಮಹಾಮಂಟಪಗಳಿವೆ. ಈ ವಿಸ್ತಾರವಾದ ಮಹಾಮಂಟಪವನ್ನೇ ಶಾಸನಗಳಲ್ಲಿ ರಂಗಮಂಟಪವೆಂದು ಕರೆಯಲಾಗಿದೆ. ಗರ್ಭಗುಡಿಯ ಮೇಲೆ ತ್ರಿತಲ–ಮೂರು ಅಂತಸ್ತುಗಳುಳ್ಳ–ವಿಮಾನವಿದೆ. ಮೇಲೆ ಚೌಕಾಕೃತಿಯ ಗುಮ್ಮಟಾಕಾರದ ಶಿಖರ, ಮಧ್ಯದಲ್ಲಿ ನಿಡಿದಾದ ಸ್ತೂಪ, ನಾಲ್ಕು ಮೂಲೆಗಳಲ್ಲಿಯೂ ಅಂತಹುದೇ ಆದ, ಆದರೆ ಅಷ್ಟು ಎತ್ತರವಲ್ಲದ ಸ್ತೂಪಗಳಿವೆ. ಗರ್ಭಗೃಹದ ಗೋಡೆಗಳನ್ನು ದೊಡ್ಡದಾದ, ನಯವಾಗಿ ಕೆತ್ತಿದ ಕಲ್ಲುಗಳಿಂದ ಕಟ್ಟಲಾಗಿದೆ. ಸುತ್ತಲೂ ಮುಚ್ಚಿದ ಪ್ರದಕ್ಷಿಣಾಪಥವಿದೆ. ಈ ಪ್ರದಕ್ಷಿಣೆಯ ಪ್ರಾಕಾರದ ಹೊರಗೋಡೆಗಳಿಗೆ ಒರಟಾದ ದಪ್ಪಕಲ್ಲುಗಳನ್ನು ಅಳವಡಿಸಿದೆ.

ದೇವಾಲಯದ ರಂಗಮಂಟಪವನ್ನು ಕೃಷ್ಣದೇವರಾಯನು ತನ್ನ ಪಟ್ಟಾಭಿಷೇಕೋತ್ಸವ ಸಂದರ್ಭದಲ್ಲಿ ಕ್ರಿ.ಶ. ೧೫೧೦ರಲ್ಲಿ ಕಟ್ಟಿಸಿ ದೇವಾಲಯದ ನಿತ್ಯ ನೈಮಿತ್ತಿಕೋತ್ಸವಗಳಿಗಾಗಿ ಕೆಲವು ಗ್ರಾಮಗಳನ್ನು ದಾನವಾಗಿ ನೀಡಿದನೆಂದು ಇಲ್ಲಿನ ಒಂದು ಶಾಸನದಲ್ಲಿ ಹೇಳಿದೆ. ಈ ಮಂಟಪವನ್ನು ಐದು ಹಜಾರ (ಅಥವಾ ಅಂಕಣ)ಗಳಾಗಿ ವಿಂಗಡಿಸಲಾಗಿದೆ. ಬೇರೆ ಬೇರೆ ಭಾಗಗಳಿಂದ ಕೂಡಿದ ವಿಧವಿಧದ ಕಂಬಗಳನ್ನು ಇಲ್ಲಿ ಕಾಣುತ್ತೇವೆ. ಮಧ್ಯದ ಆಯದಲ್ಲಿ ಹದಿನಾರು ಕಂಬಗಳಿವೆ. ಮುಂಗಾಲುಗಳನ್ನು ಮೇಲೆತ್ತಿ ಆಕ್ರಮಣ ಮಾಡುವಂತೆ ಹಿಂಗಾಲುಗಳ ಮೇಲೆ ನಿಂತಿರುವ ಸಿಂಹ (ಯಾಳಿ)ಗಳನ್ನು ಈ ಕಂಬಗಳಲ್ಲಿ ಕೆತ್ತಲಾಗಿದೆ. ಅವುಗಳ ಮೇಲೆ ಸವಾರರು ; ಕಾಲಿನ ಕೆಳಗೆ ಮಕರ, ಬಾಯಿಂದ ತೂಗು ಬಿದ್ದಿರುವ ಸರಪಳಿಗಳು. ಮಧ್ಯದ ಅಂಕಣದ ಛಾವಣಿ ಉಳಿದ ಭಾಗಗಳಿಗಿಂತ ಎತ್ತರವಾಗಿದ್ದು ಅದರ ನಾಲ್ಕು ದಿಕ್ಕುಗಳಿಗೆ ಕೂಡಿಸಿದ ತೊಲೆಗಳಿಗೆ ಸೇರಿಕೊಂಡಂತಿರುವ ಒಳ ಛಾವಣಿಯಲ್ಲಿ ವರ್ಣಚಿತ್ರಗಳಿವೆ. ದ್ರೌಪದೀ ಸ್ವಯಂವರದ ಸಮಯದಲ್ಲಿ ಅರ್ಜುನನು ಮತ್ಸ್ಯಯಂತ್ರವನ್ನು ಭೇದಿಸುತ್ತಿರುವ ಚಿತ್ರ, ಪಲ್ಲಕ್ಕಿಯಲ್ಲಿ ಕುಳಿತು ಮೆರವಣಿಗೆಯಲ್ಲಿ ಹೋಗುತ್ತಿರುವ ಸನ್ಯಾಸಿಯ ಚಿತ್ರ, ದಶಾವತಾರ, ಕಾಮದಹನ ಮೂರ್ತಿ, ತ್ರಿಪುರ ಸಂಹಾರಿ, ಕಲ್ಯಾಣಸುಂದರ ಮುಂತಾದ ಶಿವನ ರೂಪಗಳುಳ್ಳ ಹಲವಾರು ವರ್ಣ ಚಿತ್ರಗಳು ಇಲ್ಲಿವೆ. ವಿಜಯ

ನಗರದ ಕಾಲದ ಚಿತ್ರಕಲೆಗೆ ಪ್ರತ್ಯಕ್ಷ ಸಾಕ್ಷಿಗಳಾಗಿ ಇವು ಈಗಲೂ ಉಳಿದಿವೆ. ಈ ಚಿತ್ರಗಳು ಮಾಸದಂತೆ ಪುರಾತತ್ತ್ವ ಇಲಾಖೆಯವರು ಇವುಗಳನ್ನು ರಕ್ಷಿಸಲು ಯತ್ನಿಸಿದ್ದಾರೆ.

ರಂಗಮಂಟಪದ ಪಶ್ಚಿಮಕ್ಕೆ ಅರ್ಧಮಂಟಪ. ಇದರ ದ್ವಾರದಲ್ಲಿ ನಾಲ್ಕು ಹಸ್ತಗಳುಳ್ಳ ಎತ್ತರವಾದ ದ್ವಾರಪಾಲಕರ ವಿಗ್ರಹಗಳಿವೆ. ಈ ಮಂಟಪದ ಹೊರಗೋಡೆಗಳಲ್ಲಿ ಅರೆಯುಬ್ಬು ಚಿತ್ರಗಳನ್ನು ಕೊರೆಯಲಾಗಿದೆ. ಮಧ್ಯದ ಛಾವಣಿಯಲ್ಲಿ ಅನೇಕ ದಳಗಳುಳ್ಳ ಕಮಲದ ಅಲಂಕಾರ. ಈ ಮಂಟಪ ಸಹ ವಿಜಯನಗರದ ಕಾಲಕ್ಕೇ ಸೇರಿದುದೆನ್ನಬಹುದು. ಇದಕ್ಕೆ ಹೊರಗಡೆ ಪೂರ್ವ ದಿಕ್ಕಿನಲ್ಲಿರುವ ಮೂರು ಅಂತಸ್ತುಗಳ ಸಣ್ಣ ಗೋಪುರವನ್ನು ಸಹ ಕೃಷ್ಣದೇವ ರಾಯನೇ ಕಟ್ಟಿಸಿದನು.

ದೇವಾಲಯದ ಮುಂದೆ ಪೂರ್ವಾಭಿಮುಖವಾಗಿರುವ ೫೨ ಮೀಟರು ಗಳಷ್ಟು ಎತ್ತರದ ಗೋಪುರವನ್ನು ದಾಟಿ ಒಳಗೆ ಬಂದರೆ ವಿಶಾಲವಾದ ಅಂಗಳ ವಿದೆ. ಎರಡು ಬದಿಗಳಲ್ಲೂ ಅನೇಕ ಸಣ್ಣ ಗುಡಿಗಳೂ ಫಲಪೂಜಾಮಂಟಪಗಳೂ ಇವೆ. ನೈಋತ್ಯ ಮೂಲೆಯಲ್ಲಿರುವ ಇಂತಹದೇ ಮಂಟಪದಲ್ಲಿ ಇದಕ್ಕೂ ಹಿಂದಿನ ಕಾಲದ ಕಂಬಗಳನ್ನು ನೋಡಬಹುದು. ಈ ಅಂಗಳವನ್ನೂ ದಾಟಿ ಒಳಗೆ ಹೋಗಲು ಇರುವ ಇನ್ನೊಂದು ಗೋಪುರ ದ್ವಾರವೇ ಮೇಲೆ ಹೇಳಿದ ಕೃಷ್ಣದೇವರಾಯನು ಕಟ್ಟಿಸಿದ ಗೋಪುರ. ಉತ್ತರ ದಿಕ್ಕಿಗೆ ಇನ್ನೊಂದು ಗೋಪುರವಿದೆ. ಇದನ್ನೂ ಈ ಅರಸನೇ ಕಟ್ಟಿಸಿದನೆಂದು ಪ್ರತೀತಿ ಇದೆ. ಆದರೆ ಐದು ಅಂತಸ್ತುಗಳ ಈ ಗೋಪುರ ಹಿಂದಿನ ಹೈದರಾಬಾದ್ ಸಂಸ್ಥಾನಕ್ಕೆ ಸೇರಿದ ಕಣ್ಣಗಿರಿಯ (ಕನಿಗಿರಿ) ನಾಯಕನ ಕಟ್ಟಿಸಿದನಾದ ಕಾರಣ ಇದಕ್ಕೆ ಕನಿಗಿರಿ ಗೋಪುರವೆಂದೇ ಹೆಸರು ಬಂದಿದೆ. ಈ ಗೋಪುರಗಳಲ್ಲಿ ಅಲಂಕೃತವಾದ ಗೋಡೆಗಂಬಗಳಿವೆ.

ಒಳಗಣ ಅಂಗಳದಲ್ಲಿ ಸಣ್ಣ ಗುಡಿಗಳಲ್ಲಿ ಗಮನಾರ್ಹವಾದುದು ಸೂರ್ಯನಾರಾಯಣ, ಮುಕ್ತಿನರಸಿಂಹ, ತಾರಕೇಶ್ವರ,ಪಾತಾಳೇಶ್ವರ, ಸರಸ್ವತಿ ಮತ್ತು ನವದುರ್ಗಾ ಗುಡಿಗಳು. ಮುಕ್ತಿನರಸಿಂಹನ ಗುಡಿಯೊಳಗಿನ ಮೂರ್ತಿ ಚಿಕ್ಕದಾದ ಚಾಲುಕ್ಯ ಶೈಲಿಯ ಶಿಲ್ಪ. ತಾರಕೇಶ್ವರನ ಗುಡಿಯೊಳಗೆ ಶಿವನ ವಿಗ್ರಹವಿದೆ. ಪಾರ್ವತಿ ಶಿವನ ತೊಡೆಯಲ್ಲಿ ಆಸೀನಳಾಗಿದ್ದಾಳೆ. ಸರಸ್ವತೀ ಗುಡಿಯಲ್ಲಿ ವೀಣಾಪಾಣಿಯಾದ ಕಪ್ಪುಶಿಲೆಯ ಎರಡು ಕೈಗಳುಳ್ಳ ಸರಸ್ವತಿಯ

ವಿಗ್ರಹವಿದೆ. ಹಿಂದೆ ಕೊರೆದ ತೂತುಗಳುಳ್ಳ ಪ್ರಭಾವಳಿ. ಹಿಂದುಗಡೆಯ ಪ್ರಾಕಾರದಲ್ಲಿ ವಿದ್ಯಾರಣ್ಯಯತಿಗಳದೆನ್ನಲಾದ ಇನ್ನೊಂದು ಚಿಕ್ಕ ಗುಡಿಯಿದೆ. ಇಮ್ಮಡಿ ಹರಿಹರನು ಇದನ್ನು ಕಟ್ಟಿಸಿದನೆನ್ನಲಾಗಿದ್ದರೂ ಶೈಲಿಯ ಆಧಾರದ ಮೇಲೆ ಅದಕ್ಕೂ ಹಿಂದಿನ ಕಾಲದ್ದೆಂದು ಕೆಲವರು ಭಾವಿಸಿದ್ದಾರೆ. ಆದರೆ ಗುಡಿಯೊಳಗಿರುವ ವಿಗ್ರಹ ಮಾತ್ರ ಪ್ರಾಚೀನವಲ್ಲ, ಅರ್ವಾಚೀನ. ನೈಋತ್ಯದಲ್ಲಿರುವ ದೀಪಸ್ತಂಭವನ್ನು ಕ್ರಿ.ಶ. ೧೪೨೮ರಲ್ಲಿ ಮೀನದಾಮವಾತ್ಯನ ಮೊಮ್ಮಗನಾದ ಐತನು ನಿಲ್ಲಿಸಿದನೆಂದು ಅಲ್ಲಿನ ಶಾಸನದಲ್ಲಿ ಹೇಳಿದೆ.

ಪ್ರವೇಶದ್ವಾರದ ಗೋಪುರ ದ್ವಾರಕ್ಕೆ ಎರಡಂತಸ್ತುಗಳ ಕಲ್ಲಿನ ತಳಪಾಯ. ಮೇಲ್ಭಾಗವೆಲ್ಲಾ ಇಟ್ಟಿಗೆಯಿಂದ ಕಟ್ಟಲಾಗಿದೆ. ಗೋಪುರದ ಒಳಕೋಣೆಯಲ್ಲಿ ಚೌಕಾಕಾರದ ಕೆತ್ತಿದ ಕಲ್ಲು ಕಂಬಗಳಿವೆ. ಕೆಳಭಾಗದಲ್ಲಿ ಸುರುಳಿಯ ಚಿತ್ರಗಳ ಪಟ್ಟಿಗಳಿವೆ. ಬೋದಿಗೆಗಳಿಗೆ ಬದಲಾಗಿ ಚಪ್ಪಟೆಯಾದ ಕೆತ್ತಿದ ಕಲ್ಲುಗಳನ್ನು ಕಾಣುತ್ತೇವೆ. ಇಮ್ಮಡಿ ದೇವರಾಯನ ದಂಡನಾಯಕರಲ್ಲೊಬ್ಬನಾದ ಪ್ರೋಲುಗಂಟಿ ತಿಪ್ಪನು ಈ ಗೋಪುರವನ್ನು ಕಟ್ಟಿಸಿದನೆಂದು ಸಾಹಿತ್ಯಕ ಆಧಾರಗಳಿಂದ ಊಹಿಸಲಾಗಿದೆ. ಗೋಪುರಕ್ಕೆ ಹನ್ನೊಂದು ಅಂತಸ್ತುಗಳಿದ್ದು ಮೇಲೆ ದೀರ್ಘವರ್ತುಲಾಕಾರದ ಶಿಖರವಿದೆ. ಗೋಪುರದಲ್ಲಿ ಗಾರೆಯಿಂದ ಮಾಡಿದ ಸುಂದರವಾದ ವಿಗ್ರಹಗಳಿವೆ.

ದೇವಾಲಯದ ಮುಂದುಗಡೆ ಅರ್ಧಮೈಲಿನಷ್ಟು ಉದ್ದವಾದ, ವಿಶಾಲವಾದ ರಾಜಬೀದಿ ಇದೆ. ಇಕ್ಕೆಲಗಳಲ್ಲಿಯೂ ಮಂಟಪಗಳ ಅವಶೇಷಗಳನ್ನು ಈಗಲೂ ನಾವು ಕಾಣುತ್ತೇವೆ. ಎರಡು ಅಂತಸ್ತಿನ ಶ್ರೀಮಂತರ ಮನೆಗಳು, ಪ್ರವಾಸಿಗಳ ತಂಗುದಾಣಗಳು, ಮಾರುಕಟ್ಟೆಗಳೂ ಅಂದು ಇಲ್ಲಿದ್ದು ಈ ರಸ್ತೆ ಭವ್ಯತೆಯಿಂದ ಕಂಗೊಳಿಸುತ್ತಿತ್ತು. ಈ ಬೀದಿಯ ಇನ್ನೊಂದು ತುದಿಯಲ್ಲಿ ದೇವಾಲಯಕ್ಕೆ ಎದುರಾಗಿ ಎರಡಂತಸ್ತಿನ ಒಂದು ಮಂಟಪವಿದೆ. ಈ ಮಂಟಪ ನಾಜೂಕಾಗಿ ಕೆತ್ತಿದ ಹನ್ನೆರಡು ಕಂಬಗಳನ್ನು ಆಧರಿಸಿ ನಿಂತಿದೆ. ತಿರುಗಣೆಯಲ್ಲಿ ತಿರುಗಿಸಿ ನಯಗೊಳಿಸಿದ ಕಪ್ಪುಶಿಲೆಯ ೧೨ನೇ ಶತಮಾನದ ಚಾಲುಕ್ಯ ಶೈಲಿಯ ಕಂಬಗಳಿವು.

ರಾಜಬೀದಿಯಿಂದ ಮುಂದಕ್ಕೆ ಎಡಭಾಗದ ಕಾಲುದಾರಿಯಲ್ಲಿ ಹೋದಾಗ ನದೀತೀರದ ಮೇಲೆ ಕೋದಂಡರಾಮನ ದೇವಾಲಯವಿದೆ. ಇದರ ಗರ್ಭಗೃಹ ಆಯಾಕಾರದಲ್ಲಿದೆ. ಒಳಗೆ ಹಿರಿದಾದ ಬಂಡೆಯಲ್ಲಿ ರಾಮ, ಸೀತೆ ಮತ್ತು

ಲಕ್ಷ್ಮಣರ ಉಬ್ಬುಚಿತ್ರಗಳನ್ನು ಕೊರೆಯಲಾಗಿದೆ. ಮುಂದಿನ ಕಲ್ಯಾಣಮಂಟಪ ಅಲಂಕಾರಮಯವಾಗಿದೆ ಸಮೀಪದಲ್ಲಿರುವ ಇನ್ನೊಂದು ಆಲಯವನ್ನು ಸೂರ್ಯನಾರಾಯಣ ದೇವಾಲಯವೆಂದು ಕರೆದರೂ ವಾಸ್ತವಿಕವಾಗಿ ಪುರುಷಾಕಾರದ ಹದಿನಾರು ಕೈಗಳಿರುವ ಸುದರ್ಶನ ವಿಗ್ರಹವನ್ನು ಇಲ್ಲಿ ನಾವು ನೋಡಬಹುದು. ಇದಕ್ಕೆ ಹೊಂದಿದಂತಿರುವ ಇನ್ನೊಂದು ಸಣ್ಣ ಗುಡಿಯಲ್ಲಿ ಚಕ್ರಾಕಾರದ ಯಂತ್ರದಲ್ಲಿ ಹನುಮಂತನ ವಿಗ್ರಹವಿದೆ. ಯಂತ್ರೋದ್ಧಾರಕ ಪ್ರಾಣದೇವನೆಂದು ಕರೆಯಲಾದ ಈ ವಿಗ್ರಹವನ್ನು ಕೃಷ್ಣದೇವರಾಯನ ಗುರುಗಳಾದ ವ್ಯಾಸರಾಯರು ಪ್ರತಿಷ್ಠೆಮಾಡಿದರೆಂದು ಹೇಳುತ್ತಾರೆ. ಸುತ್ತಲಿನ ಕಲ್ಲು ಬಂಡೆಗಳಲ್ಲಿ ಅಲ್ಲಲ್ಲಿ ಅನಂತಶಯನನ ಅರೆಯುಬ್ಬುಚಿತ್ರಗಳನ್ನು ಕೊರೆದಿರುವುದು ಕಂಡುಬರುತ್ತದೆ. ಕೋದಂಡರಾಮನ ಗುಡಿಯ ಅಕ್ಕಪಕ್ಕದಲ್ಲಿ ರಂಗನಾಥ, ವರಾಹ, ಅನಂತಶಯನರ ಗುಡಿಗಳಿವೆ. ಅನಂತಶಯನ ಗುಡಿಯನ್ನು ದಾಟಿದರೆ ದಕ್ಷಿಣ ದಿಕ್ಕಿನಲ್ಲಿ ಅಚ್ಯುತರಾಯನ ದೇವಾಲಯ ಕಾಣಿಸುತ್ತದೆ. ಈ ದೇವಾಲಯದ ಮುಂದೆ ಇಕ್ಕೆಲಗಳಲ್ಲಿಯೂ ಮಂಟಪಗಳುಳ್ಳ ಬೀದಿಯಿದೆ. ಇದನ್ನು ಸೂಳೆ ಬಜಾರ್ ಎಂದು ಕರೆಯುತ್ತಾರೆ. ಈ ಭಾಗವೆಲ್ಲ ಈಗ ಹಾಳಾಗಿದ್ದು ಇದನ್ನು ಭತ್ತದ ಗದ್ದೆಗಳಾಗಿ ಮಾಡಿದ್ದಾರೆ.

ಈ ದೇವಾಲಯವನ್ನು ಅಚ್ಯುತದೇವರಾಯನು ಕಟ್ಟಿಸಿದನು. ಎಂತಲೇ ಇದಕ್ಕೆ ಆ ಹೆಸರು. ದೇವಾಲಯದಲ್ಲಿರುವ ದೇವರನ್ನು ತಿರುವೆಂಗಳನಾಥನೆಂದು ಶಾಸನದಲ್ಲಿ ಹೆಸರಿಸಲಾಗಿದೆ. ಕ್ರಿ.ಶ. ೧೫೩೪ರಲ್ಲಿ ಈ ಆಲಯವನ್ನು ಕಟ್ಟಿಸಲಾಯಿತು. ಅನೇಕ ಭಾಗಗಳುಳ್ಳ ಆಲಯ ಉತ್ತರಾಭಿಮುಖವಾಗಿದೆ. ಹೊರಗಿನ ಪ್ರಾಕಾರದ ಉತ್ತರ ಭಾಗದಲ್ಲಿ ಒಳಪ್ರಾಕಾರದ ಮೂರು–ಪೂರ್ವ, ಪಶ್ಚಿಮ ಮತ್ತು ಉತ್ತರ–ದಿಕ್ಕುಗಳಲ್ಲಿಯೂ ಗೋಪುರಗಳಿವೆ. ಹೊರ–ಒಳ ಅಂಗಳಗಳ ಎರಡು ಬದಿಗಳಲ್ಲೂ ಪ್ರಾಕಾರದ ಗೋಡೆಗೆ ಹೊಂದಿಕೊಂಡಂತೆ ಕಂಬಗಳ ಮಂಟಪಗಳಿವೆ. ಒಳ ಅಂಗಳದಲ್ಲಿ ಗರ್ಭಗೃಹ, ಮುಚ್ಚಿದ ಪ್ರದಕ್ಷಿಣಾಪಥ, ಅಂತರಾಳ, ಅರ್ಧಮಂಟಪ ಮತ್ತು ಅಲಂಕೃತ ಮಹಾಮಂಟಪಗಳು ಒಂದಕ್ಕೊಂದು ಹೊಂದಿಕೊಂಡಿವೆ. ಇವೆಲ್ಲ ವಿಜಯನಗರದ ಶೈಲಿಯ ವಾಸ್ತುಶಿಲ್ಪಗಳು. ಗರ್ಭಗೃಹದ ನೈಋತ್ಯಕ್ಕೆ ದೇವಿಯ ಗಡಿ ಇದೆ. ಪೂರ್ವಾಭಿಮುಖವಾಗಿರುವ ಈ ಉಪಗುಡಿಯಲ್ಲೂ ಅಂತರಾಳ ಮತ್ತು ಕಂಬಗಳ ಅರ್ಧಮಂಟಪ ಗರ್ಭಗೃಹಕ್ಕೆ ಹೊಂದಿಕೊಂಡಿದೆ. ಈ ದೇವಾಲಯ ಒಂದು ವಿಧದಲ್ಲಿ ವಿಠ್ಠಲನ

ಗುಡಿಯನ್ನು ಹೋಲುತ್ತದೆಯಾದರೂ ಆ ಆಲಯದ ಸೊಗಸು-ಸೌಂದರ್ಯಗಳು ಇದರಲ್ಲಿಲ್ಲ. ಇಲ್ಲಿನ ಮಂಟಪಗಳ ಛಾವಣಿಗಳು ವಿಶಿಷ್ಟ ರೀತಿಯದಾಗಿವೆ. ಚಿತ್ರಪಟ್ಟಿಕೆಗಳಲ್ಲಿ ಕೆತ್ತಲಾಗಿರುವ ಆನೆಗಳು, ಕುದುರೆಗಳು, ಅರಬ್ ವರ್ತಕರು, ಇತರ ಪರದೇಶದವರು–ಇವರ ಚಿತ್ರಗಳು ಹೆಚ್ಚು ವಾಸ್ತವಿಕವಾಗಿವೆ. ದೇವಾಲಯದ ಬಾಗಿಲುವಾಡದ ಪೀಠದ ಮೇಲೆ ಮತ್ತು ಅಕ್ಕಪಕ್ಕಗಳಲ್ಲಿ ಕೆತ್ತಲಾಗಿರುವ ದಶಾವತಾರದ ಚಿತ್ರಗಳು ಭಾವಪೂರ್ಣವಾಗಿವೆ. ಮಕರವಾಹನಾರೂಢಳಾದ ಗಂಗಾದೇವಿಯ ಸುಂದರವಾದ ಮೂರ್ತಿ ಸಹ ದ್ವಾರಬಂಧದಲ್ಲಿದೆ. ಮಂಟಪಗಳ, ಪಡಸಾಲೆಗಳ, ಕಂಬಗಳ ಮೇಲೆ, ಗೋಡೆಗಳ ಮೇಲೆ ಕೃಷ್ಣನ ಲೀಲೆಗಳನ್ನು ನಿರೂಪಿಸುವ ಕೆತ್ತನೆಯ ಚಿತ್ರಗಳೂ ಇವೆ.

ಈ ದೇವಾಲಯದಿಂದ ಸೂಳೆ ಬಜಾರಿಗೆ ಹಿಂದಿರುಗಿದರೆ ನೈರುತ್ಯಕ್ಕೆ ನದೀತೀರದಲ್ಲಿ ಪುರಂದರ ದಾಸರದೆಂದು ಕರೆಯಲಾದ ಮಂಟಪವಿದೆ. ಇದನ್ನೂ ತುಲಾಭಾರ ಸ್ತಂಭವನ್ನೂ ದಾಟಿದರೆ ವಿಠ್ಠಲರಾಯನ ಗುಡಿ ಸಿಗುತ್ತದೆ. ಕಲಾಕುಶಲತೆಯ ದೃಷ್ಟಿಯಿಂದ ಅತ್ಯಂತ ಸುಂದರವಾದ ಈ ದೇವಾಲಯ, ಕೃಷ್ಣದೇವರಾಯನೇ ಕಟ್ಟಿಸಿದ ಕೃಷ್ಣಸ್ವಾಮಿ ದೇವಾಲಯ ಹಾಗೂ ಮೇಲೆ ಗಮನಿಸಿದ ಅಚ್ಯುತರಾಯನ ದೇವಾಲಯಗಳೊಡನೆ ಶ್ರೇಷ್ಠತೆಗಾಗಿ ಸ್ಪರ್ಧೆ ಹೂಡಿದಂತೆ ತೋರುತ್ತದೆ. ಕಲಿಂಗದ ದಿಗ್ವಿಜಯಾನಂತರ ಕೃಷ್ಣದೇವರಾಯನು ಕಟ್ಟಿಸಿದ ಆಲಯವಿದು. ವಾಸ್ತವಿಕವಾಗಿ ಇದು ಇಮ್ಮಡಿ ದೇವರಾಯನ ಕಾಲದಲ್ಲೇ ಅಸ್ತಿತ್ವಕ್ಕೆ ಬಂದಿತ್ತೆನ್ನಲು ಆಧಾರಗಳಿವೆ. ಪ್ರೋಲುಗಂಟಿ ತಿಪ್ಪ ಈ ಆಲಯದ ಭೋಗ ಮಂಟಪವನ್ನು ಕಟ್ಟಿಸಿದನೆಂದು ಹೇಳಲಾಗಿದೆ. ದೇವಾಲಯದ ಕಲಾತ್ಮಕವಾದ ಮುಂಭಾಗವನ್ನು ಕಲ್ಯಾಣಮಂಟಪ ಹಾಗೂ ಥಲಿಪೂಜಾಮಂಟಪಗಳನ್ನೂ ಕಟ್ಟಿಸಿದ ಯಶಸ್ಸು ಕೃಷ್ಣದೇವರಾಯನಿಗೆ ಸಲ್ಲುತ್ತದೆ.

ವಿಜಯನಗರದ ವಾಸ್ತು ಶೈಲಿಯ ಭವ್ಯತೆಯ ಪರಾಕಾಷ್ಠೆಯನ್ನು ನಾವು ಈ ಆಲಯದಲ್ಲಿ ಕಾಣುತ್ತೇವೆ. ವಿಸ್ತಾರವಾದ (೧೬೪ಮೀ. × ೯೪.೫ಮೀ.) ದೀರ್ಘಚತುರಸ್ರಾಕಾರದ ಆವರಣದಲ್ಲಿರುವ ಈ ದೇವಾಲಯದ ಪೂರ್ವ, ಉತ್ತರ ಮತ್ತು ದಕ್ಷಿಣ ದಿಕ್ಕುಗಳಲ್ಲಿ ಉತ್ತುಂಗವಾದ ಗೋಪುರಗಳಿವೆ. ದಕ್ಷಿಣ ದಿಕ್ಕಿನಲ್ಲಿರುವ ಗೋಪುರ ಇವುಗಳಲ್ಲೆಲ್ಲ ಹೆಚ್ಚು ಅಲಂಕಾರಮಯವಾದದ್ದಾಗಿದೆ. ಮಧ್ಯಭಾಗದಲ್ಲಿ ಗರ್ಭಗೃಹ ಮತ್ತು ಅದರ ಅಕ್ಷದಲ್ಲಿ ಮಂಟಪಗಳು. ಇನ್ನೂ ಹಲವು. ಅಲ್ಲಿ ಕಲ್ಯಾಣಮಂಟಪ, ಉತ್ಸವಮಂಟಪ, ನೂರುಕಂಬಗಳ ಮಂಟಪ



ಹಂಪೆಯ ವಿಜಯ ವಿಠ್ಠಲ ಗುಡಿಯ ಸಭಾಮಂಟಪ

ಮತ್ತು ಮುಂಭಾಗದಲ್ಲಿ ಕಲ್ಲಿನ ರಥ ; ಇವಲ್ಲದೆ ಇಲ್ಲೊಂದು ೧೨.೨ ಮೀ. ಎತ್ತರದ ದೀಪಸ್ತಂಭ ಸಹ ಇದ್ದಿತಾದರೂ, ಅದು ಈಗ ಮುರಿದು ತುಂಡಾಗಿದೆ.

ವಿಠ್ಠಲನ ರೂಪದ ವಿಷ್ಣುವಿನ ಈ ದೇವಾಲಯದಲ್ಲಿ ಯಾವ ವಿಗ್ರಹ ವನ್ನೂ ಪ್ರತಿಷ್ಠಾಪಿಸಿರಲಿಲ್ಲವೆಂದೂ, ಪೂಜಾದಿಗಳು ನಡೆಯುತ್ತಿರಲಿಲ್ಲವೆಂದೂ ಪ್ರತೀತಿ ಇದೆ. ಆದರೆ ಇದು ಸತ್ಯಕ್ಕೆ ದೂರ ; ಬರಿಯ ಊಹೆ. ಕ್ರಿ.ಶ ೧೫೬೫ ರಲ್ಲಿ ನಡೆದ ಅಂತಿಮ ಕದನದ ವರೆಗೂ ಇಲ್ಲಿ ಪೂಜಾದಿ ಉತ್ಸವಗಳು ನಡೆಯು ತ್ತಿದ್ದುವೆನ್ನಲು ಖಚಿತವಾದ ಶಾಸನಾಧಾರಗಳಿವೆ. ಗರ್ಭಗೃಹ ಪೂರ್ವಾಭಿಮುಖ ವಾಗಿದೆ. ಇದು ಹಾಗೂ ಇದಕ್ಕೆ ಹೊಂದಿದ ಮಂಟಪಗಳೆಲ್ಲ ಸೇರಿ ಹೆಚ್ಚು ಎತ್ತರವಿಲ್ಲದ ಆದರೆ ಉದ್ದನೆಯ (೬.೭ ಮೀ. ಎತ್ತರ, ೭೦ ಮೀ. ಉದ್ದ) ಒಂದು ಕಟ್ಟಡದ ಗುಂಪು ಎನಿಸಿಕೊಳ್ಳುತ್ತವೆ. ಮುಚ್ಚಿದ ಪ್ರದಕ್ಷಿಣಾಪಥ, ಅಂತರಾಳ, ಮುಚ್ಚಿದ ಅರ್ಧಮಂಟಪ, ಮತ್ತು ತೆರೆದ ಮಹಾಮಂಟಪಗಳು ಗರ್ಭಗೃಹಕ್ಕೆ ಹೊಂದಿಕೊಂಡಿವೆ. ಮಹಾಮಂಟಪದ ಪಕ್ಕದ ಗೋಡೆಗಳು ಸಮಪ್ರಮಾಣದ ಹಿಂಜರಿತಗಳಿಂದ ಕೂಡಿದ್ದು ಇದರ ಅತಿಯಾದ ಉದ್ದ ಅಗಲದ ಭಾಗ ೩೦.೫ ಮೀಟರ್ ಅಳತೆಯುಳ್ಳದ್ದಾಗಿದೆ.

ಈ ದೇವಾಲಯದ ವಾಸ್ತು ವೈಭವವನ್ನು ಹೀಗೆ ವರ್ಣಿಸಲಾಗಿದೆ: "ಇದನ್ನು ಬಹುಕೋನಗಳುಳ್ಳ ಮೇಲುಪಾಯದ ಮೇಲೆ ಕಟ್ಟಲಾಗಿದೆ. ಇದರ ಸಂಯುಕ್ತ ಸ್ತಂಭಗಳನ್ನು (compound pillars) ಬಹು ಸೂಕ್ಷ್ಮವಾಗಿ ಏಕ ಶಿಲೆಯಿಂದ ಕೊರೆದು ಸಾಲು ಸಾಲಾಗಿ ನಿಲ್ಲಿಸಿದ್ದಾರೆ. ಅವುಗಳ ಮೇಲೆ ಅನೇಕ ಪ್ರಾಣಿಗಳ, ಪಕ್ಷಿಗಳ, ಬಳ್ಳಿಗಳ ಚಿತ್ರಗಳನ್ನು ಬಿಡಿಸಿದ್ದಾರೆ. ಅದರ ಅಡಿಪಾಯದ ಅಷ್ಟ ಪಟ್ಟಿಕೆಗಳ ಮೇಲೂ ಅಂಥದೇ ಕೆತ್ತನೆ ಕೆಲಸಮಾಡಿ ಮಧ್ಯೆ ಮಧ್ಯೆ ಇರುವ ಸಣ್ಣ ಗೂಡುಗಳಲ್ಲಿ 'ಭದ್ರಮಂಟಪ'ಗಳ ರೀತಿಯಲ್ಲಿ ದೇವಾನುದೇವತೆಗಳ ಸಣ್ಣ ಉಬ್ಬುಚಿತ್ರಗಳನ್ನು ಕೊರೆದಿದ್ದಾರೆ. ಕಾರ್ನೀಸಿನಿಂದ ಜೋಲುತ್ತ ಉದ್ದಕ್ಕೆ ಹರಿದಿರುವ ಮತ್ತು ಕಲ್ಲಿನ ಶಲಾಕೆಗಳಿಂದ ಒಟ್ಟಿಗೆ ಹಿಡಿದಿಡಲ್ಪಟ್ಟಿರುವ ಕಮಲದ ಎಲೆಗಳು, ಕಮಲಗಳನ್ನು, ಕಮಲನಾಳಗಳನ್ನು ಕಚ್ಚಿ ಹಾರುತ್ತಿರುವಂಥ ಹಂಸ ಗಳನ್ನು ಕೆತ್ತಿರುವ ಕಾರ್ನೀಸು, ಅನೇಕ ಜಟಿಲ ವಿನ್ಯಾಸಗಳಲ್ಲಿ ಕಾಣಸಿಕೊಳ್ಳುವ ಕಲ್ಪಲತೆಗಳು, ಬಹು ಸುಂದರವಾಗಿ ಕೊರೆದಿರುವ ಯೋಗಾಸನಗಳ, ಅಕ್ಕಪಕ್ಕ ಗಳಲ್ಲಿ ಅಲ್ಲಿ ಇಲ್ಲಿ ಕೆತ್ತಿರುವ ಕೊಕ್ಕರೆ ಮುಂತಾದ ನೀರು ಹಕ್ಕಿಗಳು, ಬಹುಶಃ ಜಾತಕಗಳು, ತುದಿಯಲ್ಲಿ ಎದ್ದು ಕಾಣುವಂತೆ ಅಲ್ಲಿ ಇಲ್ಲಿ ಗೋಚರವಾಗುವ

ಸಣ್ಣ ಗೋಪುರಗಳು ಇವೆಲ್ಲವೂ ವಿಜಯನಗರ ಶೈಲಿಯೆಂಬ ಪ್ರತ್ಯೇಕ ಶೈಲಿಯೊಂದನ್ನು ಇತರ ಶೈಲಿಗಳಿಂದ ಪ್ರತ್ಯೇಕಿಸಿ ತೋರಿಸುತ್ತವೆ. ಕಲ್ಯಾಣಮಂಟಪಕ್ಕೊಯ್ಯುವ ಮೆಟ್ಟಿಲುಗಳ ಅಕ್ಕಪಕ್ಕದಲ್ಲಿ ಸುಂದರವಾಗಿ, ಆದರೆ ಹೊಯ್ಸಳ ಶೈಲಿಯ ತುಂಬು ಅಲಂಕಾರವಿಲ್ಲದೆ ಕೆತ್ತಿರುವ ಆನೆಗಳು, ಮಕರಗಳು ಇವುಗಳು ಒಂದಾದಮೇಲೊಂದರಂತೆ ಕಾಣಿಸಿಕೊಳ್ಳುತ್ತವೆ. ಎರಡನೆಯದಾಗಿ ಕಲ್ಯಾಣ ಮಂಟಪ ಮತ್ತು ಫಲಪೂಜಾಮಂಟಪಗಳು ವಿಜಯನಗರ ಶೈಲಿಯ ವೈಶಿಷ್ಟ್ಯವೆನ್ನಬೇಕು. ಇಲ್ಲಿ ಮೇಲೆ ಹೇಳಿದಂತಹ ಸಾಲುಗಂಬಗಳಿಗೆ ಹೊಸ ವಿನ್ಯಾಸಗಳನ್ನು ಸೇರಿಸಿರುತ್ತಾರೆ. ಉದಾಹರಣೆಗೆ : ಹಿಂಗಾಲಿನಿಂದ ಕುಪ್ಪಳಿಸಿ ಮೇಲೆದ್ದಿರುವ ಯಾಳಿಗಳ ಮೇಲೆ ಕುಳಿತಿರುವ ವಿಜಯನಗರದ ರಾವುತರು ಮತ್ತು ಕೆಲವು ಸಾರಿ ದೇವತೆಗಳು. ಮೂರನೆಯದಾಗಿ ಸಮಕಾಲೀನ ಪ್ರವಾಸಿಯೊಬ್ಬ ವರ್ಣಿಸಿರುವ ನೃತ್ಯಕೂಟ ಅಲ್ಲಿ ಉಂಟು. ಈ ಮಂಟಪಗಳ ಚತುಷ್ಕೋಣಾಕಾರದ ಕಂಬಗಳ ಮೇಲೆ ಪ್ರತಿ ಮುಖದಲ್ಲೂ ಮೂರು ಹಂತಗಳಲ್ಲಿ ಸಣ್ಣ ಉಬ್ಬುಚಿತ್ರಗಳಾಗಿ ಮೋಹಕ ಭಂಗಿಗಳಲ್ಲಿರುವ ದಶಾವತಾರಗಳು, ನರ್ತನಭಂಗಿಗಳು, ಬಹು ಸುಂದರ ಹರ್ಷ ಭಂಗಿಗಳೂ, ಮೂರು ಮುಖದ ಅಥವಾ ಐದು ಮುಖದ ವಿಚಿತ್ರ ವೇಣುಗೋಪಾಲಕರು—ಇವರನ್ನು ಕೆತ್ತಲಾಗಿದೆ."

ಈ ದೇವಾಲಯದ ಕಂಬಗಳು ಶ್ರೀಮಂತ ಸೌಂದರ್ಯಕ್ಕೆ ಕಾರಣವಾಗಿವೆ. ಮಹಾಮಂಟಪದಲ್ಲಿ ೫೬ ಕಂಬಗಳಿವೆ. ಅವುಗಳಲ್ಲಿ ೪೦ ಕಂಬಗಳು ಸಮಾನಾಂತರದಲ್ಲಿದ್ದು ಮಂಟಪವನ್ನು ಹಜಾರಗಳಾಗಿ ವಿಂಗಡಿಸಿದೆ. ಒಂದೊಂದು ಕಂಬವೂ ಬೃಹದ್ಗಾತ್ರದ್ದಾಗಿದ್ದು, ಶಿಲ್ಪಕಲೆಯ ಉತ್ತಮ ಮಾದರಿಯಾಗಿದೆ. ಏಕಶಿಲೆಯ ಈ ಕಂಬಗಳಲ್ಲಿ ಶಿಲೆಯು ಕಾಂಡ ಮಧ್ಯದಲ್ಲಿ ಆಸರೆಯಾಗಿದ್ದು, ಸುತ್ತಲೂ ವಿಗ್ರಹಗಳನ್ನು ಒಂದಕ್ಕೊಂದು ಸೇರಿಸಿ ಕೆತ್ತಲಾಗಿದೆ. ಇನ್ನೊಂದು ಸ್ತಂಭ ವಿನ್ಯಾಸದಲ್ಲಿ ಮಧ್ಯದ ಕಾಂಡದ ಸುತ್ತಲೂ ತೆಳುವಾದ ಮರಿಗಂಬಗಳಂತಿರುವ ಕಂಬಗಳು ಸುತ್ತುವರಿದಿರುತ್ತವೆ. ಈ ಸಣ್ಣ ಕಂಬಗಳ ಮೇಲೆ ಲಘುವಾಗಿ ಹೊಡೆದಾಗ ಸಪ್ತಸ್ವರಗಳ ನಾದಮಾಧುರ್ಯ ಹೊಮ್ಮುತ್ತದೆ.

ದೇವಾಲಯದ ಮುಂದಿರುವ ಕಲ್ಲಿನ ರಥ ಮತ್ತೊಂದು ಸುಂದರವಾದ ಕೃತಿ. ಸಾಧಾರಣವಾಗಿ ವೈಷ್ಣವ ದೇವಾಲಯಗಳ ಮುಂದೆ ಗರುಡನಿಗೆಂದು ಒಂದು ಸಣ್ಣ ಗುಡಿಯನ್ನು ಕಟ್ಟಿರುತ್ತಾರೆ. ಆದರೆ ಈ ರಥ ಆ ಗರುಡನ ಗುಡಿಯಾಗಿ ಪರಿಣಮಿಸಿದೆ. ರಥದ ಒಳಗಡೆಯ ಗರ್ಭಗೃಹದಲ್ಲಿ ಗರುಡನ ವಿಗ್ರಹ

ವಿದೆ. ದೇವಾಲಯಗಳಲ್ಲಿ ಉತ್ಸವ ಸಂದರ್ಭಗಳಲ್ಲಿ ಹೊರಡಿಸುವ ಮರದ ರಥಗಳನ್ನೇ ಇದು ಹೋಲುತ್ತದೆ. ಬಹಳ ಮಟ್ಟಿಗೆ ಇದಕ್ಕೆ ಸ್ಫೂರ್ತಿ ನೀಡಿದುದು ಕೋಣಾರ್ಕದ ಸೂರ್ಯ ರಥವಾಗಿರಬೇಕು. ಕಲಿಂಗ ದಿಗ್ವಿಜಯದ ಸಂದರ್ಭದಲ್ಲಿ ಅಲ್ಲಿ ಕಂಡ ಆ ಆಲಯವನ್ನು ಕಿರಿಯ ಪ್ರಮಾಣದಲ್ಲಿ ಇಲ್ಲಿ ಅಳವಡಿಸಿರಬೇಕು. ಈ ರಥಕ್ಕೂ ಕಲ್ಲಿನ ಚಕ್ರಗಳಿದ್ದು, ಅವುಗಳನ್ನು ತಿರುಗಿಸಲು ಸಹ ಸಾಧ್ಯವಿತ್ತು. ಈಗ ಹಾಗೆ ಅದನ್ನು ತಿರುಗಿಸಲು ಸಾಧ್ಯವಾಗದಂತೆ ಮಾಡಿದ್ದಾರಷ್ಟೆ. ರಥದ ಮೇಲೆ ಅಂದು ಇಟ್ಟಿಗೆಯಲ್ಲಿ ವಿಮಾನವೊಂದನ್ನು ಕಟ್ಟಲಾಗಿತ್ತು. ಈಗ ಅದು ಇಲ್ಲ. ಸೂಕ್ಷ್ಮ ಕೆತ್ತನೆಯ ಕಲಸಗಳನ್ನು ಇಲ್ಲಿ ಕಾಣಬಹುದು.

ಗರ್ಭಗೃಹದ ಮೇಲೆ ತ್ರಿತಲ ವಿಮಾನವಿದೆ. ಹೊರಗೋಡೆಗಳಲ್ಲಿ ಅಲಂಕಾರಿಕ ದೇವಕೋಷ್ಠಗಳನ್ನೂ ಕುಂಭಪಂಜರಗಳನ್ನೂ ಕೆತ್ತಲಾಗಿದೆ. ದೇವಕೋಷ್ಠಗಳು ದೇವಾಲಯದಲ್ಲಿನ ಮುಖ್ಯ ದೇವರಿಗೆ ಸೂಕ್ತವಾದ ಪರಿವಾರ ದೇವತೆಗಳನ್ನು ಸ್ಥಾಪಿಸಲು ಗೋಡೆಗಳಲ್ಲಿಯೇ ಕೆತ್ತಲಾದ ಸಣ್ಣ ಗೂಡುಗಳು. ಕುಂಭಪಂಜರ ಎಂಬುದು ಮಡಕೆಯಾಕಾರದ ಒಂದು ಉಬ್ಬುಚಿತ್ರ. ಅದರ ಬಾಯಿಂದ ಸಣ್ಣದೊಂದು ಕಂಬ ಹೊರಬಂದಂತಿದ್ದು ಅದರ ಮೇಲ್ಭಾಗದಲ್ಲಿ ಪಂಜರದಂತಹ ವಿನ್ಯಾಸ (ಲತಾವಿನ್ಯಾಸ) ಇರುತ್ತದೆ. ದೇವಕೋಷ್ಠಗಳ ಮೇಲಿನ ಅಲಂಕಾರಿಕ ಪಟ್ಟಿಗಳಲ್ಲಿ ಭೂತಗಣಗಳ ಚಿತ್ರಗಳಿವೆ.

ಅಚ್ಯುತರಾಯ ಹಾಗೂ ವಿಠ್ಠಲನ ಗುಡಿಗಳಷ್ಟೇ ಕಲಾತ್ಮಕವಾದ ಇನ್ನೊಂದು ದೇವಾಲಯ ಕೃಷ್ಣಸ್ವಾಮಿಯ ಆಲಯ. ಅಚ್ಯುತರಾಯನ ದೇವಾಲಯ ಕೃಷ್ಣಸ್ವಾಮಿಯ ದೇವಾಲಯದ ಪಡಿಯಚ್ಚೆನ್ನಬಹುದು. ಇದನ್ನು ಕ್ರಿ. ಶ. ೧೫೧೩ ರಲ್ಲಿ ಕೃಷ್ಣದೇವರಾಯನು ಕಟ್ಟಿಸಿದ. ಉದಯಗಿರಿಯನ್ನು ವಶಪಡಿಸಿಕೊಂಡಾಗ ಅಲ್ಲಿದ್ದ ಕೃಷ್ಣವಿಗ್ರಹವೊಂದನ್ನು ಈ ದೇವಾಲಯದ ಮಂಟಪದಲ್ಲಿ ಪ್ರತಿಷ್ಠಾಪಿಸಿದನೆಂದು ಶಾಸನದ ಹೇಳಿಕೆ. ದೇವಾಲಯದಲ್ಲಿ ಈಗ ಆ ವಿಗ್ರಹವಿಲ್ಲ. ಅದನ್ನು ಮದರಾಸಿನ ವಸ್ತುಸಂಗ್ರಹಾಲಯದಲ್ಲಿ ಇಡಲಾಗಿದೆ. ಇದೂ ಒಂದು ಸಂಕೀರ್ಣ ಆಲಯ–ಎತ್ತರವಾದ ಪ್ರಾಕಾರದ ಗೋಡೆಗಳ ನಡುವಣ ಅಂಗಳದಲ್ಲಿ ಪೂರ್ವಾಭಿಮುಖವಾಗಿರುವ ಈ ಆಲಯ ದ್ರಾವಿಡ ಶೈಲಿಯಲ್ಲಿದೆ. ದೀರ್ಘ ಚತುರಸ್ರಾಕಾರದ ತಳಹದಿಯ ಮೇಲೆ ಇದು ನಿಂತಿದೆ. ವಿಜಯನಗರ ಶೈಲಿಯ ಇತರ ದೇವಾಲಯಗಳಂತೆ ಇಲ್ಲಿಯೂ ಗರ್ಭಗೃಹ, ಅಂತರಾಳ, ನಡುವೆ ಮುಚ್ಚಿದ ಪ್ರಾಕಾರ, ಅರ್ಧಮಂಟಪ ಮತ್ತು ತೆರೆದ

ಮಹಾಮಂಟಪಗಳಿದ್ದು ಆವರಣದಲ್ಲಿ ಇತರ ಪರಿವಾರ ದೇವತೆಗಳ ಗುಡಿಗಳೂ ಇವೆ. ತ್ರಿತಲ ವಿಮಾನದ ಮೇಲೆ ದುಂಡಾಗಿರುವ ಶಿಖರ. ವಾಯುವ್ಯ ಮೂಲೆಯಲ್ಲಿ ದೇವಿಯ ಗುಡಿ ಇದೆ. ಇಲ್ಲಿಯೂ ಏಕಶಿಲೆಯ ಜವಳಿ ಕಂಬಗಳ ಮೇಲೆ ಯಾಳಿಯ, ಸಸ್ಯಗಳ ವಿನ್ಯಾಸಗಳನ್ನು ಬಿಡಿಸಲಾಗಿದೆ. ಕೃಷ್ಣನ ಬಾಲಲೀಲೆಗಳಿಗೆ ಸಂಬಂಧಿಸಿದ ಚಿತ್ರಗಳೂ ಇವೆ. ದ್ವಾರಬಂಧದ ಎರಡು ಕಡೆಗಳ ಕಂಬಗಳಲ್ಲಿ ಗಂಗಾದೇವತೆ ನರ್ತಿಸುತ್ತಿದ್ದಂತೆ ಇದ್ದು ಅವಳ ಎತ್ತಿದ ಕೈಗಳಿಂದ ಕಲ್ಪಲತೆಗಳು ಇಳಿದು ಬಿದ್ದಿವೆ. ದೇವಾಲಯದ ಮುಖ್ಯ ದ್ವಾರದ ಈ ತೋಳಗಂಬಗಳು ಬಹು ಕಲಾತ್ಮಕವಾಗಿದ್ದು ಮಾದರಿಯಾದ ಜೋಡಿಗಳಾಗಿವೆ.

ಆಲಯದೊಳಗಿರುವ ಸಣ್ಣ ಗುಡಿಗಳಲ್ಲಿ ಸುಬ್ರಹ್ಮಣ್ಯನಿಗಾಗಿ ಮೀಸಲಾದ ಗುಡಿಯೂ ಇದೆ. ಇಲ್ಲಿ ಸುಬ್ರಹ್ಮಣ್ಯನ ಹಲವಾರು ಗಾರೆಯ ಶಿಲ್ಪಗಳಿವೆ. ನವಿಲಿನ ಮೇಲೆ ಕುಳಿತಿರುವ ಈ ವಿಗ್ರಹ ಕೃಷ್ಣನ ಆಲಯದೊಳಗಿರುವುದು ಒಂದು ವಿಶೇಷ. ದೇವಾಲಯದ ಪೂರ್ವ, ದಕ್ಷಿಣ ಮತ್ತು ಉತ್ತರ ದಿಕ್ಕುಗಳಲ್ಲಿ ಮೂರು ಗೋಪುರಗಳಿವೆ. ಅವು ಶಿಥಿಲವಾಗಿವೆ. ಅವುಗಳಲ್ಲಿ ಪೂರ್ವದಿಕ್ಕಿನಲ್ಲಿ, ಪಶ್ಚಿಮಾಭಿಮುಖವಾಗಿರುವ ಗೋಪುರ ಹಿರಿದು. ಗಾರೆಯಲ್ಲಿ ಮಾಡಿರುವ ಗುರಾಣಿಗಳನ್ನು ಹಿಡಿದ ಸೈನಿಕರ, ಉನ್ಮತ್ತ ಕುದುರೆಗಳ, ಆನೆಗಳ ಶಿಲ್ಪಗಳನ್ನು ಈ ಗೋಪುರದಲ್ಲಿ ಅಳವಡಿಸಲಾಗಿದೆ. ಇವು ಕೃಷ್ಣದೇವರಾಯನ ಒರಿಸ್ಸಾ ದಂಡಯಾತ್ರೆಯ ಕದನಚಿತ್ರಗಳನ್ನು ನಿರೂಪಿಸುವಂತೆ ತೋರುತ್ತವೆ.

ಕೃಷ್ಣದೇವರಾಯನು ರಾಜಧಾನಿಯಲ್ಲಿ ಕಟ್ಟಿಸಿದ ದೇವಾಲಯಗಳಲ್ಲಿ ಹಜಾರ ರಾಮಸ್ವಾಮಿ ದೇವಾಲಯವೂ ಒಂದು. ಕ್ರಿ. ಶ. ೧೫೧೩ರ ಸುಮಾರಿನಲ್ಲಿ ಈ ದೇವಸ್ಥಾನಕ್ಕೆ ಕೃಷ್ಣದೇವರಾಯನು ಕೆಲವು ಹೊಸ ಕಟ್ಟಡಗಳನ್ನು ಸೇರಿಸಿದನು. ಅರಮನೆಗೆ ಹೊಂದಿಕೊಂಡಿರುವ ಈ ಆಲಯ ಬಹುಶಃ ಅರಮನೆಯ ವಾಸಿಗಳು, ರಾಜಮನೆತನದವರು ದೈನಂದಿನ ಪೂಜೆ ಸಲ್ಲಿಸಲೆಂದೇ ಈ ದೇವಾಲಯವನ್ನು ಕಟ್ಟಿಸಿರುವಂತೆ ತೋರುತ್ತದೆ. ಇತರ ದೇವಾಲಯಗಳಲ್ಲಿದ್ದಂತೆ ಇಲ್ಲೂ ಗರ್ಭಗೃಹ, ಅದರ ಅಕ್ಷದಲ್ಲಿನ ಮಂಟಪಗಳು, ಕಲ್ಯಾಣ ಮಂಟಪ, ಪರಿವಾರ ಗುಡಿಗಳು ಇವೆ. ಪೂರ್ವದ ತುದಿಯಲ್ಲಿರುವ ತೆರೆದ ಮಂಟಪದಲ್ಲಿ ನಿಡಿದಾದ, ಘನಾಕಾರದ ಅಲಂಕೃತ ಕಂಬಗಳಿವೆ. ಇದಕ್ಕೆ ಹೊಂದಿದ ಅರ್ಧಮಂಟಪದ ಎರಡು ಪಕ್ಕಗಳಲ್ಲಿ ಕೈಸಾಲೆ ಮತ್ತು ಪೂರ್ವದಿಕ್ಕಿನಲ್ಲಿ ಒಂದು ಸ್ತಂಭವೇದಿಕೆ ಇವೆ. ಕೈಸಾಲೆಗಳಲ್ಲಿ ಘನಾಕಾರದ ಕಂಬಗಳಿವೆ

ವಿಜಯನಗರದ ಆರಂಭಕಾಲದ್ದೆನ್ನಬಹುದಾದ ಪುಷ್ಪ ಬೋದಿಗೆಯುಳ್ಳ ಅಡ್ಡ ಬೋದಿಗೆಗಳಿವೆ. ಅರ್ಧಮಂಟಪದ ಮಧ್ಯೆ ನಾಲ್ಕು ನುಣುಪಾದ ನಾಜೂಕಾಗಿ ಕೆತ್ತಲ್ಪಟ್ಟ ಘನಾಕೃತಿಯ ಕಪ್ಪು ಶಿಲೆಯ ಕಂಬಗಳಿವೆ. ಇವುಗಳ ಮೇಲೆ ಗಣೇಶ, ಮಹಿಷಮರ್ದಿನಿ, ಹನುಮಂತ, ವಿಷ್ಣುವಿನ ಅವತಾರಗಳು-ಇವುಗಳ ಉಬ್ಬು ಚಿತ್ರಗಳಿವೆ. ಕಲ್ಕಿಯ ಅವತಾರವನ್ನು ನಿರೂಪಿಸುವುದು ವಿಶಿಷ್ಟವಾಗಿದೆ. ನಾಲ್ಕು ಕೈಗಳುಳ್ಳ ವಿಷ್ಣು, ಶಂಖ, ಚಕ್ರ, ಕತ್ತಿ ಮತ್ತು ಗುರಾಣಿಗಳನ್ನು ಹಿಡಿದು ಕುದುರೆಯ ಮೇಲೆ ಕುಳಿತಂತೆ ಕಲ್ಕಿಯನ್ನು ಚಿತ್ರಿಸಲಾಗಿದೆ. ಗರ್ಭಗುಡಿಯ ಹೊರಗೋಡೆಗಳನ್ನು ಮೂರು ಬಾರಿ ಮುಂಚಾಚಿ, ಎರಡು ಸಲದ ಹಿಂಜರಿತದಿಂದ ಗೂಡಿನಂತೆ ತೋರುವ ಹಾಗೆ ನಿರ್ಮಿಸಲಾಗಿದೆ. ಅಂತರಾಳ ಮತ್ತು ಮಂಟಪಗಳ ಹೊರಗೋಡೆಗಳೂ ಹೀಗೇ ಇದ್ದು ಎರಡೂ ಕಡೆ ದ್ವಾರಪಾಲರಿರುವ ದೇವಕೋಷ್ಠಗಳು, ಕುಂಭಪಂಜರಗಳು ಎದ್ದು ಕಾಣುತ್ತವೆ.

ಗರ್ಭಗೃಹದ ಉತ್ತರದಲ್ಲಿರುವ ಅಮ್ಮನವರ ಗುಡಿ, ಗಾತ್ರದಲ್ಲಿ ಸಣ್ಣದಾದರೂ ಅಲಂಕಾರದಲ್ಲಿ ಹೆಚ್ಚು ಭವ್ಯವಾಗಿದೆ. ಈ ಗುಡಿಯ ಅಂತರಾಳದ ಪೂರ್ವಗೋಡೆಯಲ್ಲಿ ನರಸಿಂಹನ ಉಬ್ಬುಚಿತ್ರಗಳು, ದ್ವಾರಬಂಧದಲ್ಲಿ ವೈಷ್ಣವ ಮುನಿಗೆ ದಾನ ನೀಡುತ್ತಿರುವ ಹಾಗೂ ಮುನಿಯೊಬ್ಬನಿಂದ ಏನನ್ನೋ ಪಡೆಯುತ್ತಿರುವ ಅರಸನೊಬ್ಬನ ಉಬ್ಬುವಿಗ್ರಹಗಳೂ ಇವೆ. ಈ ವೈಷ್ಣವ ಮುನಿ ವ್ಯಾಸರಾಯನೆಂದೂ, ಅರಸನು ಕೃಷ್ಣದೇವರಾಯನೆಂದೂ ಗುರುತಿಸಲಾಗಿದೆ. ದೇವಾಲಯದ ಆವರಣವನ್ನು ಹಾಗೂ ಈಶಾನ್ಯದಲ್ಲಿರುವ ಕಲ್ಯಾಣಮಂಟಪವನ್ನು ಕ್ರಿ.ಶ. ೧೫೨೧ರಲ್ಲಿ ಕಟ್ಟಿಸಲಾಯಿತು. ಇದು ಪ್ರಾಕಾರದ ಗೋಡೆಗೆ ಹೊಂದಿಕೊಂಡಂತೆ ಕಟ್ಟಲ್ಪಟ್ಟಿರುವುದರಿಂದ ಆ ಗೋಡೆಯಲ್ಲಿ ಮೊದಲ ಚಿತ್ರಿಸಲಾಗಿದ್ದ ಅರೆಯುಬ್ಬು ಚಿತ್ರಗಳು ಈಗ ಮುಚ್ಚಿಹೋಗಿವೆ. ದೇವಾಲಯದ ಹೊರಗೋಡೆಗಳ ಮೇಲೆ ಸಮಾನಾಂತರದಲ್ಲಿರುವ ಅಂಕಣಗಳಲ್ಲಿ ರಾಮಾಯಣದಿಂದ, ಕೃಷ್ಣಲೀಲೆಯಿಂದ ಆರಿಸಿದ ಕಥಾ ಪ್ರಸಂಗಗಳನ್ನು ಉಬ್ಬುಚಿತ್ರಗಳಲ್ಲಿ ವರ್ಣಿಸಲಾಗಿದೆ. ಋಷ್ಯಶೃಂಗ ಮುನಿ ಪುತ್ರಕಾಮೇಷ್ಠಿಯಾಗವನ್ನು ಮಾಡುವ, ಸೀತೆಯ ಸ್ವಯಂವರ ಸಮಯದಲ್ಲಿ ಶಿವಧನುಸ್ಸನ್ನು ಹಲವಾರು ಜನ ಸಭೆಗೆ ಹೊತ್ತುಕೊಂಡು ಬರುತ್ತಿರುವ, ರಾಮನು ಸಪ್ತಸಾಲಗಳನ್ನು ಒಂದೇ ಬಿಲ್ಲಿನಿಂದ ತುಂಡರಿಸುವ ಚಿತ್ರಪಟ್ಟಿಕೆಗಳು ಮನೋಹರವಾಗಿವೆ. ಎಲ್ಲ ಹಿಂದೂದೇವತೆಗಳು ಇಲ್ಲಿ ಕಾಣಿಸಿಕೊಂಡಿದ್ದಾರೆ. ಬೌದ್ಧಾವತಾರಿ ವಿಷ್ಣುವಿನ ಎರಡು ಸಣ್ಣ ಅರೆ

ಯುಬ್ಬು ಚಿತ್ರಗಳು ಸಹ ಗರ್ಭಗೃಹದ ಗೋಡೆಯ ಮೇಲಿವೆ. ಪೂರ್ವ, ಪಶ್ಚಿಮ ಮತ್ತು ಉತ್ತರ ದಿಕ್ಕುಗಳಲ್ಲಿನ ಪ್ರಾಕಾರದ ಹೊರಭಿತ್ತಿಗಳಲ್ಲೂ ಐದು ಪಟ್ಟಿಕೆಗಳಲ್ಲಿ ಪ್ರಾಣಿಗಳ, ನರ್ತಕಿಯರ, ಕೃಷ್ಣಲೀಲೆಯ ಚಿತ್ರಗಳನ್ನು ಬಿಡಿಸಲಾಗಿದೆ. ಇದನ್ನು ಒಂದು ಬಯಲು ಚಿತ್ರಶಾಲೆಯೆನ್ನಲು ಯಾವ ಅಡ್ಡಿಯೂ ಇಲ್ಲ.

ಈ ದೇವಾಲಯವನ್ನು ಕೃಷ್ಣದೇವರಾಯನು ಕಟ್ಟಿಸಿದನೆಂಬ ಪ್ರತೀತಿ ಇದ್ದರೂ ಇದು ಅವನ ಕಾಲಕ್ಕಿಂತ ಹಿಂದಿನದಾಗಿದ್ದು, ಇದರಲ್ಲಿನ ಭಾಗಗಳ ಶೈಲಿಯಲ್ಲಿ ವೈವಿಧ್ಯ ಕಂಡುಬರುತ್ತದೆ. ಇಲ್ಲಿ ದೊರೆತ ಸಂಸ್ಕೃತ ಶಾಸನವೊಂದರಲ್ಲಿ ಅರಸನಾದ ದೇವರಾಯನ ಪ್ರಸ್ತಾಪವಿದೆ. ಆತನು ಮೊದಲನೆಯ ದೇವರಾಯನೇ ಅಥವಾ ಇಮ್ಮಡಿ ದೇವರಾಯನೇ ಎಂಬ ಬಗೆಗೆ ಖಚಿತವಾಗಿ ಏನನ್ನೂ ಹೇಳಲಾಗದು. ರಾಣಿ ಅನ್ನಲಾದೇವಿಯು ಸುಮಾರು ಕ್ರಿ.ಶ. [illegible]ರಲ್ಲಿ ಮಾಡಿದ ದಾನದ ಉಲ್ಲೇಖ ಇನ್ನೊಂದು ಶಾಸನದಲ್ಲಿದೆ. ಇಮ್ಮಡಿ ದೇವರಾಯನಿಗೆ ಹೊ(ಪೊ)ನ್ನಲದೇವಿ ಎಂಬ ಹೆಸರಿನ ಅರಸಿಯಿದ್ದಳು. ಅನ್ನಲಾದೇವಿ ಇದೇ ಹೊನ್ನಲದೇವಿಯೆ ? ತಿಳಿಯದು. ದೇವಾಲಯದ ದ್ವಾರದ ಪಕ್ಕದಲ್ಲಿರುವ ಕೈಸಾಲೆಗಳ ವಾಸ್ತುಶೈಲಿ, ಅನ್ಯತ್ರವಿರುವ ಹಿಂದಿನ ಕಾಲದ ಕಂಬಗಳು. ಗೋಪುರಗಳಾಗಲೀ, ಸಂಕೀರ್ಣ ಕಂಬಗಳಾಗಲೀ ಇಲ್ಲದಿರುವಿಕೆ ಇವುಗಳೆಲ್ಲ ಈ ದೇವಾಲಯ ಕೃಷ್ಣದೇವರಾಯನ ಕಾಲಕ್ಕೂ ಹಿಂದಿನ ವಿಜಯನಗರ ಸಾಮ್ರಾಜ್ಯದ ಆರಂಭದ ಕಾಲಕ್ಕೆ ಸೇರಿದುದೆನ್ನಲು ಆಧಾರವಾದ ಅಂಶಗಳು. ಹೊಸ ಗುಡಿಗಳನ್ನು, ಮಂಟಪಗಳನ್ನು ಕೃಷ್ಣದೇವರಾಯನು ಸೇರಿಸಿದನೆಂಬುದು ಸ್ಪಷ್ಟ. ಈ ದೇವಾಲಯಕ್ಕೆ ಹಜಾರ ರಾಮಸ್ವಾಮಿ ಎಂಬ ಹೆಸರು ಬಂದುದಕ್ಕೆ, ಅಲ್ಲಿನ ರಾಮಾಯಣಕ್ಕೆ ಸಂಬಂಧಿಸಿದ ರಾಮನ ಅನೇಕ ಚಿತ್ರಗಳು ಕಾರಣವೆಂಬುದೊಂದು ಹೇಳಿಕೆ. ಆದರೆ ಈ ದೇವಾಲಯ ಅರಮನೆಗೆ ಹೊಂದಿಕೊಂಡಂತಿದ್ದು ಅಲ್ಲಿ ವಾಸಿಸುತ್ತಿದ್ದ ರಾಜಮನೆತನದವರು ಇಲ್ಲಿ ಪೂಜೆ ಸಲ್ಲಿಸುತ್ತಿದ್ದರೆಂಬುದು ಸತ್ಯಕ್ಕೆ ಸಮೀಪವಾದ ಮಾತು. ಹಜಾರ (ತೆಲುಗು), ಅಸಾರಂ (ತಮಿಳು) ಎಂದರೆ ಸಭಾಮಂಟಪ, ಅರಮನೆಯ ದ್ವಾರಮಂಟಪ ಎಂಬರ್ಥವಿದೆ. ಈ ಅರ್ಥ ಹೆಚ್ಚು ಸಮಂಜಸವೆನಿಸುತ್ತದೆ.

ಇದೇ ರೀತಿಯಲ್ಲಿ ವಿಜಯನಗರದ ಆರಂಭದ ಕಾಲದಲ್ಲಿ, ಅಥವಾ ಅದಕ್ಕೂ ಹಿಂದೆ ಕಟ್ಟಲಾದ ಕೆಲವು ದೇವಾಲಯಗಳು ಹಂಪೆಯಲ್ಲಿವೆ. ಆನೆಯ ಲಾಯಕ್ಕೆ ಪೂರ್ವ ದಿಕ್ಕಿನಲ್ಲಿರುವ ಆಲಯಗಳ ಒಂದು ಗುಂಪು ಇಂತಹವು.

ಇಮ್ಮಡಿ ದೇವರಾಯನು ಕ್ರಿ. ಶ. ೧೪೨೬ರಲ್ಲಿ ಇಲ್ಲಿ ಪಾರ್ಶ್ವನಾಥಜಿನನಿಗಾಗಿ ಒಂದು ಚೈತ್ಯಾಲಯವನ್ನು ಕಟ್ಟಿಸಿದನು. ಗರ್ಭಗೃಹ, ಅರ್ಧಮಂಟಪ ಮತ್ತು ಮಹಾಮಂಟಪಗಳುಳ್ಳ ಈ ಆಲಯದ ಗರ್ಭಗೃಹವನ್ನು ನೀಳವಾದ, ಆಯಾಕಾರದ, ನುಣುಪುಗೊಳಿಸಿದ ಕಲ್ಲುಗಳಿಂದ ಕಟ್ಟಲಾಗಿದೆ. ಅರ್ಧಮಂಟಪ ಮತ್ತು ಮಹಾಮಂಟಪಗಳಲ್ಲಿ ಘನಾಕೃತಿಯ ಭಾರವಾದ ಸರಳವಾದ ಕಂಬಗಳಿವೆ.

ಕಂಪಿಲಿಗೆ ಹೋಗುವ ದಾರಿಯಲ್ಲಿ ಕಮಲಾಪುರದ ಪ್ರವಾಸಿಬಂಗಲೆಯ ಸಮೀಪದಲ್ಲಿ ಗಾಣಗಿತ್ತಿಗುಡಿ ಎಂದು ಕರೆಯಲಾದ ಇನ್ನೊಂದು ಜೈನಬಸದಿ ಇದೆ. ಇಮ್ಮಡಿ ಹರಿಹರರಾಯನ ಮಂತ್ರಿಯಾದ ಜಿನಭಕ್ತ ಇರುಗಪ್ಪದಂಡನಾಥನು ಇದನ್ನು ಕ್ರಿ.ಶ. ೧೩೮೫ರಲ್ಲಿ ಕಟ್ಟಿಸಿ ಕುಂಥುತೀರ್ಥಂಕರರ ವಿಗ್ರಹವನ್ನು ಪ್ರತಿಷ್ಠಾಪಿಸಿದನು. ಇದರಲ್ಲಿ ಸಹ ಸರಳವಾದ ಘನಾಕಾರದ ಕಂಬಗಳಿವೆ. ಗರ್ಭಗೃಹ, ಅಂತರಾಳ, ಅರ್ಧಮಂಟಪ ಮತ್ತು ಮಹಾಮಂಟಪಗಳನ್ನೊಳಗೊಂಡ ಉತ್ತರಾಭಿಮುಖವಾದ ಈ ಬಸದಿಯ ಗರ್ಭಗೃಹದ ಮೇಲೆ ಮೆಟ್ಟಿಲು ಮೆಟ್ಟಿಲುಗಳಾಗಿ ವಿಸ್ತಾರ ಕಡಿಮೆಯಾಗುತ್ತಾ ಹೋಗುವ ಆರು ತಲಗಳ ಗೋಪುರವಿದೆ. ಇದರ ಗ್ರೀವ ಚೌಕಾಕಾರದಲ್ಲಿದೆ, ಚೌಕಾಕಾರದ ಶಿಖರದ ಮಧ್ಯೆ ಅಂಡಾಕಾರದ ಗುಮ್ಮಟ. ಮಹಾಮಂಟಪದ ಮುಂದೆ ಎತ್ತರವಾದ ಮಾನಸ್ತಂಭವಿದೆ.

ಹೇಮಕೂಟದ ಗುಡ್ಡದ ಮೇಲೂ ಇದೇ ವಿಧದ ಹಲವು ಗುಡಿಗಳಿವೆ. ಸಮಾನಾಂತರ ಮೆಟ್ಟಿಲುಗಳ ಸಾಲಿನ ಗೋಪುರದ ಶೈಲಿಯನ್ನು ಕದಂಬನಾಗರ ಶೈಲಿ ಎಂದು ಕರೆಯಲಾಗಿದೆ. ಇಲ್ಲಿನ ಗುಡಿಗಳು ಬಹುಮಟ್ಟಿಗೆ ತ್ರಿಕೂಟಾಚಲಗಳು – ಎಂದರೆ ಪೂರ್ವ ಪಶ್ಚಿಮ, ಉತ್ತರಾಭಿಮುಖವಾಗಿರುವ ಮೂರು ಗರ್ಭಗೃಹಗಳುಳ್ಳ ದೇವಾಲಯ. ಮೂರಕ್ಕೂ ಸೇರಿದಂತೆ ಒಂದು ಅರ್ಧಮಂಟಪ. ನಯಗೊಳಿಸಿದ ಆಯಾಕಾರದ ಕಲ್ಲುಗಳನ್ನು ಸೇರಿಸಿ ಕಟ್ಟಿದ ಭಿತ್ತಿಗಳು. ಸರಳವಾದ ಘನಾಕೃತಿಯ ಕಂಬಗಳು. ಚೌಕಾಕಾರದ ಶಿಖರದ ಮೇಲೆ ಅಂಡಾಕಾರದ ಗುಮ್ಮಟ – ಇವು ಈ ಗುಡಿಗಳ ಸಾಮಾನ್ಯ ಲಕ್ಷಣಗಳು. ಈ ಗುಡಿಗಳಲ್ಲಿನ ಯಾವ ಗರ್ಭಗೃಹದಲ್ಲೂ ಈಗ ವಿಗ್ರಹಗಳಿಲ್ಲ. ೧೪ನೇ ಶತಮಾನದ ಮೊದಲ ಭಾಗದಲ್ಲಿ ಕಂಪಿಲಿಯಲ್ಲಿ ಆಳುತ್ತಿದ್ದ ಮುಮ್ಮಡಿ ಸಿಂಗೆಯ ನಾಯಕನು ಇವುಗಳಲ್ಲಿ ಒಂದು ಗುಡಿಯನ್ನು ಕಟ್ಟಿಸಿದನು. ಇಲ್ಲಿನ ಇನ್ನೊಂದು ತ್ರಿಕೂಟಾಚಲದ ಗೋಡೆಗಳಲ್ಲಿ ಚೌಕಾಕಾರದ ಗೋಡೆಗಂಬಗಳಿವೆ. ಮೂರು

ಗರ್ಭಗುಡಿಗಳ ಮೇಲೂ ಮೂರು ಅಂತಸ್ತಿನ ವಿಮಾನ. ದ್ರಾವಿಡ ಶೈಲಿಯ ಪಂಜರಗಳು, ತಲೆಕೆಳಗುಮಾಡಿದ ಹಡಗಿನ ಚಪ್ಪಟೆಯ ತಳದ ಆಕಾರದ ಚಾವಣಿಯ ದಿಂಡಿನ ಮೇಲೆ ಸ್ತೂಪಿಗಳನ್ನೊಳಗೊಂಡ ಆಯಾಕಾರದ ಸಣ್ಣ ಗುಡಿಗಳ ಮಾದರಿಗಳು ಈ ವಿಮಾನದ ಮೊದಲ ತಲದಲ್ಲಿ ಕಂಡುಬರುತ್ತದೆ. ಇಲ್ಲಿ ಸ್ವಲ್ಪ ದೂರದಲ್ಲಿರುವ ಉತ್ತರ ಮುಖವಾಗಿರುವ ಮತ್ತೊಂದು ಗುಡಿಯಲ್ಲಿ ಸಮಾನಾಂತರದಲ್ಲಿ ಕಿರಿದಾಗುತ್ತಾ ಹೋಗುವ ಮೆಟ್ಟಿಲುಗಳಂತಿರುವ ಮೂರು ತಲಗಳ ವಿಮಾನವನ್ನು ಕಾಣುತ್ತೇವೆ. ಇವುಗಳೆಲ್ಲ ಸುಮಾರು 14ನೇ ಶತಮಾನದ ಆರಂಭದಲ್ಲಿ ಕಟ್ಟಲಾದ ಶೈವ ಗುಡಿಗಳು.

ಕೊನೆಯಲ್ಲಿ ಹೊಸಪೇಟೆಯಿಂದ ಹಂಪೆಗೆ ಬರುವಾಗ ದಾರಿಯಲ್ಲಿ ಸಿಗುವ ಅನಂತಶಯನ ಗುಡಿ ಎಂಬ ಹೆಸರಿನ ಗ್ರಾಮದಲ್ಲಿರುವ ಅನಂತಶಯನ (ಅನಂತ ಪದ್ಮನಾಭ)ನಿಗಾಗಿ ಕಟ್ಟಿಸಿದ ಗುಡಿಯು ಪ್ರಸ್ತಾಪ ಮಾಡಬೇಕು. ಕೃಷ್ಣದೇವರಾಯನು ತನ್ನ ಮಗ ತಿರುಮಲರಾಯನ ನೆನಪಿಗಾಗಿ ಸಾಲೆ ತಿರುಮಲಮಹಾರಾಯಪುರ ಎಂಬ ಗ್ರಾಮವನ್ನು ನೆಲೆಗೊಳಿಸಿ ಅಲ್ಲಿ ಅನಂತಪದ್ಮನಾಭ ಗುಡಿಯೊಂದನ್ನು ಕಟ್ಟಿಸಿ ಅದರ ಪೂಜೆ ಪುರಸ್ಕಾರಗಳಿಗೆಂದು ಗ್ರಾಮಗಳನ್ನು ದತ್ತಿ ಮಾಡಿದನೆಂದು ಕ್ರಿ. ಶ. ೧೫೨೪ರಲ್ಲಿ ದೊರೆತ ಶಾಸನದಲ್ಲಿ ಹೇಳಿದೆ. ೨೫ ವರ್ಷಗಳ ಬಳಿಕ ಕ್ರಿ. ಶ. ೧೫೪೯ರಲ್ಲಿ ಸದಾಶಿವರಾಯನು ದೇವರ ದರ್ಶನ ಪಡೆದು ಭೂದಾನ ಮಾಡಿದನೆಂದು ಇನ್ನೊಂದು ಶಾಸನದಿಂದ ತಿಳಿದಿದೆ. ಆದರೆ ಈಗ ಈ ಗುಡಿಯಲ್ಲಿ ವಿಗ್ರಹವಿಲ್ಲ. ಹಡಗಲಿ ತಾಲೂಕಿನ ಹೊಳಲು ಎಂಬ ಗ್ರಾಮಕ್ಕೆ ಆ ವಿಗ್ರಹವನ್ನು ಒಯ್ದು ಅಲ್ಲಿ ಇನ್ನೊಂದು ಆಲಯವನ್ನು ಅದಕ್ಕಾಗಿ ಕಟ್ಟಿಸಿ ಅಲ್ಲಿ ಸ್ಥಾಪಿಸಲಾಗಿದೆ. ಬಹುಶಃ ಮಹಮದೀಯರ ದಾಳಿಗೆ ಹೆದರಿ ಈ ಏರ್ಪಾಡನ್ನು ಮಾಡಿದಂತೆ ತೋರುತ್ತದೆ. ಆದರೆ ಅನಂತಶಯನ ಗುಡಿ ಮಾತ್ರ ವಿಶಿಷ್ಟರೀತಿಯದ್ದಾಗಿದೆ. ಈಗ ದೇವಾಲಯದ ಬಹುಭಾಗಗಳು ಭಗ್ನವಾಗಿವೆ. ದೀರ್ಘಚತುರಸ್ರಾಕಾರದ ಗರ್ಭಗೃಹ, ಅದೇ ರೀತಿಯ ಅರ್ಧಮಂಟಪ ಮತ್ತು ಮಹಾಮಂಟಪಗಳನ್ನೊಳಗೊಂಡ ಆಲಯದ ವಿಮಾನ ೨೪ ಮೀಟರುಗಳಷ್ಟು ಎತ್ತರವಾಗಿದೆ. ಸರಳಾಲಂಕರಣದ ಅಚ್ಚುಪಟ್ಟಿಯುಳ್ಳ ಅಧಿಷ್ಠಾನದ ಮೇಲೆ ಗರ್ಭಗೃಹದ ಬೋಳುಗೋಡೆಗಳಿದ್ದುವೆ. ಇದರ ಮೇಲೆ ಇಟ್ಟಿಗೆಯಿಂದ ಕಟ್ಟಲಾದ ಮೇಲ್ಕಟ್ಟಡದಲ್ಲಿ ದೀರ್ಘವರ್ತುಲಾಕಾರದ ಗ್ರೀವ ಮತ್ತು ಶಿಖರಗಳಿದ್ದು ಪಕ್ಕಗಳಲ್ಲಿ ಶಾಲಗಳು, ಪಂಜರಗಳು ಮುಂಚಾಚಿ

ಕೊಂಡಿವೆ. ಮೇಲಿನ ಸ್ತೂಪಿಗಳು ಈಗ ಉಳಿದಿಲ್ಲ, ಉಬ್ಬಿದ ಗುಮ್ಮಟವೇ ೧೦ ಮೀಟರುಗಳಷ್ಟು ಎತ್ತರವಾಗಿದೆ. ಅಂದಿನ ವಾಸ್ತುಶಿಲ್ಪಗಳ ಕೌಶಲಕ್ಕೆ ಇದೊಂದು ಉತ್ತಮವಾದ ನಿದರ್ಶನ. ಇದರ ಗರ್ಭಗೃಹಕ್ಕೆ ಮೂರು ಬಾಗಿಲುಗಳು. ಶಯನಾಸನದಲ್ಲಿನ ಸ್ವಾಮಿಯ ಭವ್ಯ ವಿಗ್ರಹವನ್ನು ಕೇವಲ ಒಂದು ಬಾಗಿಲಿನಿಂದ ಸಮಗ್ರವಾಗಿ ನೋಡಲಾಗದೆಂಬ ಕಾರಣದಿಂದ ಇಂತಹ ಏರ್ಪಾಡು. ಗರ್ಭಗುಡಿಯ ಹಿಂದಿನ ಗೋಡೆಯನ್ನೆಲ್ಲ ಹೊಂದಿಕೊಂಡ ಪೀಠ ಮಾತ್ರ ಈಗ ಇಲ್ಲಿದೆ. ಮಹಾಮಂಟಪದ ಅಲಂಕೃತ ತಳಪಾಯ ಮಾತ್ರ ಉಳಿದಿದೆ.

ಹಂಪೆಯ ನಗರದಲ್ಲಿನ ಪ್ರಮುಖ ದೇವಾಲಯಗಳ ಸಾಮಾನ್ಯ ವಾಸ್ತುಶಿಲ್ಪ ಲಕ್ಷಣಗಳನ್ನು ಮೇಲೆ ವಿವರಿಸಿದ್ದೇವೆ. ಇಲ್ಲಿ ಕಾಣಬರುವ ದೇವತೆಗಳ, ಪ್ರಾಣಿಗಳ ಮೂರ್ತಿಶಿಲ್ಪವನ್ನು ಕುರಿತು ಸಹ ಕೆಲವು ವಿವರಗಳನ್ನು ತಿಳಿಯುವುದು ಅವಶ್ಯಕ. ಇಲ್ಲಿನ ಹಲವಾರು ವಿಗ್ರಹಗಳು ಏಕಶಿಲೆಯಲ್ಲಿ ಕಡೆಯಲಾದ ಅಸಾಮಾನ್ಯ ಮೂರ್ತಿಗಳು. ಸುಮಾರು ೬.೫ ಮೀಟರ್ ಎತ್ತರದ ಉಗ್ರ ನರಸಿಂಹನ ವಿಗ್ರಹ ಇವುಗಳಲ್ಲೊಂದು. ವಿಗ್ರಹದ ಸುತ್ತಲೂ ಪ್ರಾಕಾರಗಳ ಗೋಡೆ ಎಬ್ಬಿಸಿದ್ದು, ಇದು ಒಂದು ಗುಡಿ ಎನಿಸಿಕೊಂಡಿದೆ. ನಾಲ್ಕು ಕೈಗಳ ಈ ವಿಗ್ರಹದ ತಲೆಯ ಮೇಲೆ ಏಳು ಹೆಡೆಗಳ ನಾಗ ಇದೆ. ಮೂರ್ತಿಯ ತೊಡೆಯ ಮೇಲೆ ಲಕ್ಷ್ಮಿ ಕುಳಿತಿದ್ದಂತೆ ವಿಗ್ರಹದಲ್ಲಿ ತೋರಿಸಲಾಗಿತ್ತು. ಆದರೆ ದುಷ್ಟರು ಈ ವಿಗ್ರಹವನ್ನು ತುಂಡರಿಸಿದ್ದಾರೆ. ನರಸಿಂಹನ ಬೆನ್ನ ಹಿಂದೆ ತಬ್ಬಿಹಿಡಿದಂತೆ ತೋರುವ ಆಕೆಯ ಹಸ್ತವನ್ನು ಮಾತ್ರ ಕಾಣಬಹುದು. ವಿಗ್ರಹದ ಎರಡೂ ಕಡೆಯ ಕಂಬಗಳಿಂದ ಮಕರ ತೋರಣ ಎದ್ದಿದೆ. ಕೃಷ್ಣದೇವರಾಯನ ಅಪ್ಪಣೆಯಂತೆ ಆರ್ಯ ಕೃಷ್ಣಭಟ್ಟ ಇದನ್ನು ಕ್ರಿ. ಶ. ೧೫೫೮ರಲ್ಲಿ ಪ್ರತಿಷ್ಠೆ ಮಾಡಿದನೆಂದು ಇಲ್ಲಿನ ಶಾಸನದಲ್ಲಿ ಹೇಳಿದೆ. ಇದರ ಪಕ್ಕದಲ್ಲಿ ಸುಮಾರು ಮೂರು ಮೀಟರ್ ಎತ್ತರದ ಬೃಹದಾಕಾರದ ಶಿವಲಿಂಗವಿದೆ. ಇದಕ್ಕೂ ಸುತ್ತಲು ಒಂದು ಪ್ರಾಕಾರ ಕಟ್ಟಿದೆ. ಈ ಶಿವಲಿಂಗದ ಬುಡ, ಪಕ್ಕದಲ್ಲಿ ಹರಿಯುವ ಕಾಲುವೆಯ ನೀರಿನಿಂದ ಸದಾಕಾಲ ಆವೃತವಾಗಿರುತ್ತದೆ. ಇದನ್ನು ಬಡವಿ ಎಂದೂ ಕರೆಯುತ್ತಾರೆ.

ಮತ್ತೊಂದು ವೀರಭದ್ರನ ಗುಡಿ. ಉದ್ದಾನವೀರಭದ್ರ ಎನಿಸಿಕೊಂಡ ಈ ವಿಗ್ರಹ ಸುಮಾರು ಮೂರೂವರೆ ಅಡಿ ಎತ್ತರವಿದೆ. ನಾಲ್ಕು ಕೈಗಳಲ್ಲಿ ಒಂದೊಂದರಲ್ಲೂ ಕ್ರಮವಾಗಿ ಬಿಲ್ಲು, ಖಡ್ಗ, ಬಾಣ ಮತ್ತು ಗುರಾಣಿಗಳಿವೆ.



ಹಂಪೆಯ ಲಕ್ಷ್ಮೀನರಸಿಂಹ

ವಿಗ್ರಹದ ಬಲಭಾಗದಲ್ಲಿ ದಕ್ಷನ ಒಂದು ಸಣ್ಣ ವಿಗ್ರಹವಿದೆ. ಕ್ರಿ.ಶ. ೧೫೪೫ರಲ್ಲಿ ಸ್ಥಾಪಿಸಲಾದ ಈ ವಿಗ್ರಹವನ್ನು ಶಾಸನದಲ್ಲಿ ಮುದುವೀರಣ್ಣ ಎಂದೂ ಕರೆದಿದೆ. 'ಮುದು' ಎಂದರೆ ಬೆಳೆದ ಎಂಬ ಅರ್ಥವನ್ನು ಕೊಡಲಾಗಿದೆ. ಕ್ರಮವಾಗಿ ಎಂಟು ಹಾಗೂ ಹದಿನಾರು ಅಡಿಗಳ ಎತ್ತರದ ಸಾಸಿವೇಕಾಳು ಮತ್ತು ಕಡಲೇ ಕಾಳು ಗಣೇಶರೆಂದು ಕರೆಯಲ್ಪಡುವ ಎರಡು ಬೃಹದ್ವಿಗ್ರಹಗಳನ್ನು ಇಲ್ಲಿ ಉಲ್ಲೇಖಿಸಬೇಕು. ಸಾಸಿವೆಕಾಳು ಗಣೇಶನ ಗುಡಿಯ ಮುಂದೆ ಸ್ತಂಭಗಳ ತೆರೆದ ಮಂಟಪವಿದೆ. ಈ ಸ್ತಂಭಗಳು ನಾಜೂಕಾಗಿ ಕೆತ್ತಲ್ಪಟ್ಟು ಮೇಲೆ ಹೂವಿನ ಬೋದಿಗೆಗಳಿವೆ. ಕಡಲೇಕಾಳು ಗಣೇಶನನ್ನು ಒಂದು ತೆರೆದ ಮಂಟಪ ದಲ್ಲಿಯೇ ಪ್ರತಿಷ್ಠಾಪಿಸಲಾಗಿದೆ. ಇದರ ಕಂಬಗಳು ಒಟ್ಟಾಗಿರ ಚೌಕಾಕಾರ ದಲ್ಲಿವೆ. ಈ ಬೃಹದಾಕಾರದ ವಿಗ್ರಹಗಳು ಒಂದು ವಿಧದಲ್ಲಿ ಅಂದಿನ ಅರಸರ ರಾಜಕೀಯದ ಮನೋಧರ್ಮವನ್ನು ಪ್ರತಿಬಿಂಬಿಸುತ್ತವೆ. ಇವು ಎಂತಹ ಕ್ಲೇಶ ಬಂದರೂ ವಿರೋಧಿಸುವ ಅದಮ್ಯಶಕ್ತಿಯ ಅಜೇಯತ್ವದ ಪ್ರತೀಕಗಳಾಗಿವೆ. ದುಷ್ಟ ಶಕ್ತಿಯ ವಿಜಯದ ಸಂಕೇತವಾಗಿ ಕಲ್ಲಿನಲ್ಲಿ ಮೂಡಿಬಂದಿವೆ.

ಇಂತಹ ಶಿಲ್ಪಗಳು ಕರ್ನಾಟಕದ ಹೊರಗಡೆ, ಆಂಧ್ರಪ್ರದೇಶ, ತಮಿಳು ನಾಡುಗಳಲ್ಲಿಯೂ ಕಂಡುಬಂದಿವೆ. ಕೃಷ್ಣದೇವರಾಯ, ಅಚ್ಯುತರಾಯರಂತಹ ಅರಸರು ಪವಿತ್ರಕ್ಷೇತ್ರಗಳೆನಿಸಿದ ತಿರುಪತಿ, ಕಾಂಚೀಪುರ, ಶ್ರೀರಂಗಂ ಮುಂತಾದ ಸ್ಥಳಗಳಿಗೆ ಸ್ವತಃ ಹೋಗಿ ಅಲ್ಲಿನ ದೇವರುಗಳಿಗೆ ಪೂಜೆಗಳನ್ನು ಸಲ್ಲಿಸಿದ್ದರಲ್ಲದೆ, ಆ ದೇವಾಲಯಗಳ ಆವರಣಗಳಲ್ಲಿ ಹೊಸ ಮಂಟಪಗಳನ್ನು ಕಟ್ಟಿಸುವ, ಭಗ್ನ ಮಂಟಪಗಳನ್ನು ಜೀರ್ಣೋದ್ಧಾರಗೊಳಿಸುವ, ಗೋಪುರಗಳನ್ನೆಬ್ಬಿಸುವ ಕಾರ್ಯಗಳನ್ನು ಕೈಗೊಂಡರು. ಆದ್ದರಿಂದ ವಿಜಯನಗರದ ವಾಸ್ತುಶೈಲಿ ದಕ್ಷಿಣ ಭಾರತದ ಎಲ್ಲ ಕಡೆಗಳಲ್ಲೂ ತನ್ನ ಪ್ರಭಾವವನ್ನು ಬೀರಿದೆ.

ವಿಜಯನಗರದ ಕಾಲದಲ್ಲಿ ಭಕ್ತಿಪಂಥದ ಪ್ರಭಾವದಿಂದಾಗಿ ದೇವಸ್ಥಾನ ಗಳಲ್ಲಿ ಅನೇಕ ಉತ್ಸವಗಳು, ಆಳ್ವಾರುಗಳು ಮುಂತಾದ ಪುಣ್ಯಪುರುಷರ ಜನ್ಮ ದಿನಗಳ ಸಮಾರಂಭಗಳು ಮುಂತಾದ ಹಲವಾರು ಹೊಸ ಹೊಸ ಹಬ್ಬಹರಿದಿನ ಗಳನ್ನು ಆಚರಿಸುವ ಪದ್ಧತಿ ಆರಂಭವಾಯಿತು. ಅದರ ಪರಿಣಾಮವಾಗಿ ಪರಿವಾರದೇವತೆಗಳ, ಆಳ್ವಾರುಗಳು ಮುಂತಾದವರ ಗುಡಿಗಳು, ಕಲ್ಯಾಣ ಮಂಟಪ, ವಾಹನಮಂಟಪ ಮೊದಲಾದ ಮಂಟಪಗಳೂ ದೇವಾಲಯದ ಆವರಣದಲ್ಲಿ ಕಟ್ಟಲ್ಪಟ್ಟವು.

ತಮಿಳುನಾಡಿನ ಚೆಂಗಲ್ಪೇಟೆ ಜಿಲ್ಲೆಯ ಕಾಂಚೀಪುರ ಒಂದು ಪ್ರಾಚೀನ

ವಾದ ಯಾತ್ರಾಸ್ಥಳ, ವಿಶಾಲವಾದ. ನಾಲ್ಕು ಪ್ರಾಕಾರಗಳನ್ನೊಳಗೊಂಡ ಇಲ್ಲಿನ ವರದರಾಜಸ್ವಾಮಿ ದೇವಾಲಯದಲ್ಲಿ ಹಲವಾರು ಮಂಟಪಗಳು, ಗುಡಿಗಳು ವಿಜಯನಗರದ ಕಾಲದಲ್ಲಿ ಕಟ್ಟಲ್ಪಟ್ಟವು. ಪೂರ್ವದಿಕ್ಕಿನ ಗೋಪುರ ವಿಜಯನಗರದ ಕಾಲದಲ್ಲಿ ಕಟ್ಟಲ್ಪಟ್ಟಿತು. ೫೦ ಮೀಟರುಗಳಷ್ಟು ಎತ್ತರದ ಈ ಗೋಪುರಕ್ಕೆ ಒಂಬತ್ತು ಅಂತಸ್ತುಗಳಿವೆ. ಮೇಲೆ ಹನ್ನೊಂದು ಕಲಶಗಳಿವೆ. ಇಡೀ ದೇವಾಲಯದಲ್ಲಿ ಅತಿ ಎತ್ತರವಾದ ಭಾಗ ಇದು. ಇದೇ ಕಾಂಚೀಪುರದ ಏಕಾಮ್ರೇಶ್ವರಾಲಯದ ಗೋಪುರವನ್ನು ಕೃಷ್ಣದೇವರಾಯನು ೧೬ನೇ ಶತಮಾನದ ಆರಂಭದಲ್ಲಿ ಕಟ್ಟಿಸಿದನು. ಶೈಲಿಯ ಆಧಾರದ ಮೇಲೆ ಪ್ರಸ್ತುತ ಗೋಪುರವನ್ನು ಆತನೇ ಕಟ್ಟಿಸಿದನೆನ್ನಬಹುದು. ವಿಜಯನಗರದ ಸಾಮ್ರಾಜ್ಯದ ಲಾಂಛನವಾದ ವರಾಹ ಮತ್ತು ಖಡ್ಗಗಳನ್ನು ಗೋಪುರದ ಛಾವಣಿಯಲ್ಲಿ ಕೆತ್ತಲಾಗಿದೆ. ಗೋಪುರದ ದ್ವಾರಬಂಧಗಳೆರಡು ಕಡೆಯಲ್ಲಿಯೂ ಸಾಲಭಂಜಿಕೆಯರ ವಿಗ್ರಹವಿದೆ. ದ್ವಾರಬಂಧ ಕೂಡ ಉತ್ತಮವಾದ ಕೆತ್ತನೆಯನ್ನೊಳಗೊಂಡಿದೆ. ಮೇಲ್ಪಟ್ಟದ ಇಟ್ಟಿಗೆ ಮತ್ತು ಗಾರೆಯಿಂದ ಕಟ್ಟಲಾಗಿದ್ದು ಮಧ್ಯದಲ್ಲಿ ಶಾಲ, ಮೂಲೆಗಳಲ್ಲಿ ಕೂಟ, ಮತ್ತು ಪಕ್ಕಗಳಲ್ಲಿ ಪಂಜರಗಳಿವೆ. ಶಾಲೆಗಳು ಸಣ್ಣ ಗುಡಿಗಳ ಮಾದರಿಗಳಾಗಿವೆ.



ಕಾಂಚೀಪುರ–ಏಕಾಮ್ರೇಶ್ವರ ದೇವಸ್ಥಾನ

ಮೂರನೇ ಪ್ರಾಕಾರದಲ್ಲಿರುವ ಪೆರುಂದೇವಿ ಅಮ್ಮನವರ ಗುಡಿಯು ಮುಂದಿನ ಮಹಾಮಂಟಪ ಮತ್ತು ಉಯ್ಯಾಲೆಮಂಟಪಗಳು, ನಾಲ್ಕನೇ ಪ್ರಾಕಾರದಲ್ಲಿರುವ ಮನವಾಳ ಮಹಾಮುನಿ; ತಿರುಮಳಿಶೈ ಆಳ್ವಾರ್, ಗುಡಿಗಳು, ವಾಹನಮಂಟಪ, ತುಲಾಭಾರಮಂಟಪ ಮತ್ತು ಲಾಯದ ಮಂಟಪಗಳು. ಚಕ್ರತ್ತಾಳ್ವಾರ್ (ಸುದರ್ಶನ) ಗುಡಿಯ ಎರಡೂ ಪಕ್ಕಗಳಲ್ಲಿರುವ ಮಂಟಪಗಳು, ಕಲ್ಯಾಣಮಂಟಪ ಇವುಗಳೆಲ್ಲವೂ ವಿಜಯನಗರದ ಕಾಲದಲ್ಲಿ ಆಗಿನ ಅರಸರು ಅಥವಾ ಸಮಕಾಲೀನರು ಕಟ್ಟಿಸಿದವುಗಳು. ಈ ದೇವಾಲಯದ ಪುಣ್ಯಕೋಟಿ ವಿಮಾನಕ್ಕೆ ಕೃಷ್ಣದೇವರಾಯನು ಚಿನ್ನದ ತಗಡುಗಳನ್ನು ಕ್ರಿ.ಶ. ೧೫೧೪ರಲ್ಲಿ ಹೊದಿಸಿದನೆಂದು ತಿಳಿದಿದೆ. ಅಮ್ಮನವರ ಗುಡಿ ಮೂಲತಃ ೧೩ನೇ ಶತಮಾನದಲ್ಲಿ ಕಟ್ಟಲ್ಪಟ್ಟಿದ್ದು. ಆದರೆ ಈಗಿರುವ ಗುಡಿ ಕ್ರಿ. ಶ. ೧೪೮೭ರ ಸುಮಾರಿಗೆ ಕಟ್ಟಲ್ಪಟ್ಟಿತು. ತಳಪಾಯದಿಂದ ಹಿಡಿದು ಗೋಡೆಯ ಮೇಲೆ ಮುಂದಕ್ಕೆ ಚಾಚಿಕೊಂಡಂತಿರುವ ಕಪೋತದವರೆಗೂ ಗೋಡೆಗಳಲ್ಲಿ ವೈವಿಧ್ಯಪೂರ್ಣವಾದ ಸುಂದರವಾದ ಅಲಂಕರಣ ವಿನ್ಯಾಸಗಳಿವೆ. ಹಂಪೆಯ ಹಜಾರ ರಾಮಸ್ವಾಮಿ ಆಲಯದಲ್ಲಿರುವ ದೇವಿಯ ಗುಡಿಯನ್ನೇ ಇದು ಬಹಳಮಟ್ಟಿಗೆ ಹೋಲುತ್ತದೆ. ಉಯ್ಯಾಲೆಮಂಟಪವನ್ನು ಎತ್ತರವಾದ ಪೀಠದ ಮೇಲೆ ಕಟ್ಟಲಾಗಿದೆ. ಇಲ್ಲೂ ಸಂಕೀರ್ಣ (ಜವಳಿ) ಕಂಬಗಳು, ಕಂಬಗಳ ಸುತ್ತಲೂ ಸಣ್ಣ ಸಣ್ಣ ಮೂಲೆಗಂಬಗಳು. ಇವುಗಳನ್ನು ಸೂಕ್ಷ್ಮವಾದ ಬಳ್ಳಿಯ ಅಲಂಕಾರಗಳು ಅಮರಿಸಿಕೊಂಡಿವೆ. ಕಂಬದ ಬೋದಿಗೆಗಳು ಬಹುಗಾತ್ರದ್ದಾಗಿ ಹಲವಾರು ಮುಖಗಳಾಗಿ ಬೆಳೆದಿವೆ, ಮಂಟಪದ ಒಳಛಾವಣಿಯಲ್ಲಿ ಉತ್ತಮವಾದ ಶಿಲ್ಪಗಳ ಕೆತ್ತನೆಗಳಿವೆ.

ಇಲ್ಲಿನ ಕಲ್ಯಾಣಮಂಟಪ ವಿಜಯನಗರ ಶೈಲಿಯ ಅತ್ಯುತ್ತಮ ಮಾದರಿಗಳಲ್ಲೊಂದಾಗಿದೆ. ಎತ್ತರವಾದ ಪೀಠದ ಮೇಲೆ ಕಟ್ಟಿದ ಇದರ ವಿಸ್ತೀರ್ಣ ಜಗಲಿ ಚಪ್ಪರ ಮಂಟಪಗಳು. ಏಕಶಿಲೆಯ ನಿಡಿದಾದ, ಉತ್ತಮವಾದ ಶಿಲ್ಪಗಳಿಂದ ಕೂಡಿದ ವೈವಿಧ್ಯಮಯವಾದ ೯೬ ಕಂಬಗಳು ಈ ಮಂಟಪವನ್ನು ಹೊತ್ತಿವೆ. ಎರಡು ಮೀಟರ್ ಎತ್ತರದ ಪೀಠದಲ್ಲಿ ಸಮತಲವಾದ ಪಟ್ಟಿಗಳಿವೆ. ಇವುಗಳಲ್ಲಿ ಆನೆ, ಕುದುರೆ, ಹಂಸ ಮುಂತಾದ ಪ್ರಾಣಿ–ಪಕ್ಷಿಗಳ ಚಿತ್ರಗಳನ್ನೂ ನರ್ತಕಿಯರುಗಳನ್ನೂ ರಾಮಾಯಣಕ್ಕೆ ಸಂಬಂಧಿಸಿದ ದೃಶ್ಯಗಳನ್ನೂ ಚಿತ್ರಿಸಲಾಗಿದೆ. ಅಶ್ವಾರೋಹರ, ಯಾಳಿಗಳ ಬೃಹದಾಕಾರದ ವಿಗ್ರಹಗಳನ್ನೂ ಈ ಕಂಬಗಳಲ್ಲಿ ಕೆತ್ತಿದೆ. ಇಂತಹ ಸ್ತಂಭವಿನ್ಯಾಸಗಳನ್ನು ವಾಹನಮಂಟಪ, ಮಹಾ



ಕಾಂಚೀಪುರದ ವರದರಾಜಸ್ವಾಮಿ ದೇವಾಲಯ

ಮಂಟಪಗಳಲ್ಲೂ ಕಾಣಬಹುದಾಗಿದೆ. ಮಂಟಪಗಳ ಮೂಲೆಗಳಲ್ಲಿ ಕಪೋತಗಳಿಂದ ಕಲ್ಲಿನ ಸರಪಳಿಗಳು ತೂಗಿಬಿದ್ದಂತೆ ಕಡೆಯಲಾಗಿದೆ.

ಶ್ರೀರಂಗದ ರಂಗನಾಥ ದೇವಾಲಯದಲ್ಲಿಯೂ ವಿಜಯನಗರದ ಅರಸರ ಕಾಲದಲ್ಲಿ ಕಟ್ಟಲಾದ ಹಲವಾರು ಕಟ್ಟಡಗಳಿವೆ. ನಾಲ್ಕನೆಯ ಪ್ರಾಕಾರದಲ್ಲಿರುವ ಪಾವಿಳ್ಳೈ ಗೋಪುರ, ಚಕ್ರತ್ತಾಳ್ವಾರ್ (ಸುದರ್ಶನ) ಗುಡಿ, ಶೇಷಗಿರಿರಾಯರ ಮಂಟಪ, ಮೂರನೇ ಪ್ರಾಕಾರದಲ್ಲಿರುವ 'ಐನ್ನುಕುಜಿಮೂನ್ರುವಾಶಲ್' ಮತ್ತು 'ತಟ್ಟಿರೈವಾಶಲ್' ಎಂದು ಕರೆಯಲಾದ ಗೋಪುರಗಳು ಇವುಗಳಲ್ಲಿ ಕೆಲವು. ವೆಳ್ಳೈ (ಬಿಳಿಯ)ಗೋಪುರವನ್ನು ಅಕಳಂಕನ್ ಗೋಪುರವೆಂದೂ ಕರೆಯುತ್ತಾರೆ. ಈ ಗೋಪುರವನ್ನು ೧೫ನೇ ಶತಮಾನದಲ್ಲಿ ಕಂದಾಡೈ ರಾಮಾನುಜ ಐಯ್ಯಂಗಾರ್ಯನು ಕಟ್ಟಿಸಿದನು. ಮೊದಲು ಇಲ್ಲಿದ್ದ ಗೋಪುರ ಸಿಡಿಲಿನ ಆಘಾತಕ್ಕೆ ಸಿಕ್ಕು ಭಗ್ನವಾದ ಕಾರಣ ಆತನು ತಳಪಾಯದಿಂದ ಹಿಡಿದು ಮೇಲಿನವರೆಗೂ ಇದನ್ನು ಹೊಸದಾಗಿಯೇ ಕಟ್ಟಿಸಿದನೆಂದು 'ಕೋಯಿಲ್ ಒಳಗು' ಎಂಬ ಗ್ರಂಥದಲ್ಲಿ ಹೇಳಿದೆ. ಅಲ್ಲಿ ಅದೇ ಕಾಲದ ಶಾಸನವೂ ಇದೆ. ಸುಮಾರು ೫೫ ಮೀಟರ್ ಎತ್ತರದ ಈ ಗೋಪುರ ಆ ದೇವಾಲಯದಲ್ಲಿಯೇ ಎತ್ತರವಾದ ಕಟ್ಟಡ. ಒಂಬತ್ತು ತಲೆಗಳ ಗೋಪುರದಲ್ಲಿ ಪ್ರತಿಯೊಂದರಲ್ಲೂ ಕೂಟ, ಪಂಜರ ಮತ್ತು ಶಾಲಗಳ ವಿನ್ಯಾಸಗಳಿವೆ. ಒಂದೊಂದು ತಲದ ದ್ವಾರದಲ್ಲೂ ದ್ವಾರಪಾಲಕರ ವಿಗ್ರಹಗಳಿವೆ. ಆದರೆ ಅವುಗಳನ್ನು ಹೊರತುಪಡಿಸಿದರೆ ಬೇರಾವ ವಿಗ್ರಹಗಳೂ ಈ ಗೋಪುರದಲ್ಲಿಲ್ಲ. ಚಕ್ರತ್ತಾಳ್ವಾರ್ ಗುಡಿಯಲ್ಲಿ ಸುದರ್ಶನ (ಚಕ್ರ) ದೇವರ ಪುರುಷಾಕಾರದ ವಿಗ್ರಹವಿದೆ. ಗರ್ಭಗೃಹ, ಅಂತರಾಳ, ಪ್ರದಕ್ಷಿಣಾಪಥ, ಮುಖಮಂಟಪ ಮತ್ತು ಮಹಾಮಂಟಪಗಳುಳ್ಳ ಈ ಗುಡಿಯು ಗರ್ಭಗೃಹದ ಹಿಂದೆ ನರಸಿಂಹನ ವಿಗ್ರಹವನ್ನು ಕೆತ್ತಿರುವುದನ್ನು ಕಾಣಬಹುದು. ಮುಖಮಂಟಪದಲ್ಲಿ ೧೦ ಕಂಬಗಳೂ ಮಹಾಮಂಟಪದಲ್ಲಿ ೩೬ ಕಂಬಗಳೂ ಇವೆ. ಶೇಷಗಿರಿರಾಯರ ಮಂಟಪದಲ್ಲಿ ೯೬ ಕಂಬಗಳಿವೆ. ಒಂದೊಂದು ಸಾಲಿನಲ್ಲೂ ೧೨ ಕಂಬಗಳಂತೆ ೮ ಸಾಲುಗಳಿವೆ. ೧೨ ಕಂಬಗಳಲ್ಲಿ ಅಶ್ವಾರೋಹಿಗಳ ಭವ್ಯವಾದ ಶಿಲ್ಪವಿದೆ. ಒಂದೊಂದು ಸುಮಾರು ೬ ಮೀಟರುಗಳಷ್ಟು ಎತ್ತರದ ನಿಡಿದಾದ ಉನ್ನತ ಕಲಾಕೃತಿಯ ಕಂಬಗಳಿವು. ದೈತ್ಯಾಕಾರದ ಪ್ರಾಣಿಗಳೊಡನೆ ಭೀಕರವಾಗಿ ಹೋರಾಡುತ್ತಿರುವ ಮೂರು ಮೀಟರುಗಳ ಎತ್ತರಕ್ಕೆ ಕುಪ್ಪಳಿಸಿ ನಿಂತ ಬೃಹತ್ತಾದ ಅಶ್ವಗಳ ಮೇಲೆ ರಾಹುತರು ಶೀರ ಉಪೇಕ್ಷೆಯಿಂದ ಕುಳಿತಂತೆ ಚಿತ್ರಿಸಲಾಗಿದೆ. ಕಂಬಗಳ ಮೇಲಿನ ಕಮಾನಿನ ಆಕಾರ ಒಳಗೊಂಡ ಈ ಅಲಂಕರಣ ವಿಜಯನಗರ ಶಿಲ್ಪ



ಚಿಂತಲರಾಯಸ್ವಾಮಿ ದೇವಸ್ಥಾನದ ಗೋಪುರದ ವಿವರಗಳು

ಶೈಲಿಯ ವೈಶಿಷ್ಟ್ಯವಾಗಿದ್ದು ಇಲ್ಲಿ ವೈಭವದ ಶಿಖರವನ್ನೇರಿದೆ. ಇಡೀ ಕೆತ್ತನೆ ಕಲ್ಲಿನಂತೆ ಭಾಸವಾಗದೆ ಕಾಯಿಸಿಬಿಡಿದ ಉಕ್ಕಿನ ಕಂಬಗಳಂತೆ ತೋರುತ್ತವೆ. ಈ ಶಿಲ್ಪವೈಶಿಷ್ಟ್ಯ ವಿಜಯನಗರದ ಶಿಲ್ಪಿಗಳಿಗೆ ಒಂದು ಗೀಳಾಗಿತ್ತು ಎಂಬ ಒಂದು ಅಪಸ್ವರ ಟೀಕೆಯ ರೂಪದಲ್ಲಿ ಹೊರಬಿದ್ದಿದೆ. ಮೂರನೇ ಪ್ರಾಕಾರದ ಉತ್ತರದ ಗೋಪುರವನ್ನು ಐನ್ನುಕ್ಕುಊಮೂನ್ರುವಾಶಲ್ ಗೋಪುರವೆಂದು ಅಲ್ಲಿನ ಜನ ಹೆಸರಿಸಿದ್ದಾರೆ. ಪೂರ್ವದಲ್ಲಿರುವುದು ತಟ್ಟರೈವಾಶಲ್ ಎಂಬ ಗೋಪುರ. ಉತ್ತರದ ಗೋಪುರ ಜೀರ್ಣವಾಗಿದ್ದು ಕ್ರಿ.ಶ. ೧೪೭೦ರಲ್ಲಿ ಅದನ್ನು ಸಾಳುವ ತಿರುಮಲೈರಾಜನು ಪುನಃ ನವೀಕರಿಸಿ, ಪೂರ್ವದ ಗೋಪುರವನ್ನು ಕಟ್ಟಿಸಿದನು. ತಮಿಳುನಾಡಿನ ಇನ್ನೂ ಹಲವಾರು ಪ್ರಸಿದ್ಧ ದೇವಾಲಯಗಳಲ್ಲಿ ಗೋಪುರಗಳನ್ನೂ ಮಂಟಪಗಳನ್ನೂ ವಿಜಯನಗರದ ಅರಸರು ಜೀರ್ಣ ಗೊಳಿಸಿದರು ಅಥವಾ ಹೊಸದಾಗಿ ಕಟ್ಟಿಸಿದರು. ಚಿದಂಬರಂ, ತಿರುವಣ್ಣಾಮಲೈ ಗಳಲ್ಲಿರುವ ಗೋಪುರಗಳು ಈ ಕಾಲದ್ದು. ಈ ಅರಸರು ಕಟ್ಟಿಸಿದ ಗೋಪುರ ಗಳಿಂದೇ ಇವುಗಳಿಗೆ ರಾಯಗೋಪುರಗಳೆಂಬ ಹೆಸರು ಪ್ರಸಿದ್ಧಿಗೆ ಬಂದಿತು. ವೆಲ್ಲೂರಿನ ಕೋಟೆಯಲ್ಲಿ, ಕಾಂಚೀಪುರದ ಏಕಾಮ್ರೇಶ್ವರ ದೇವಾಲಯದಲ್ಲಿ ಜಂಬುಕೇಶ್ವರ ಮತ್ತು ವಿರಿಂಚಿಪುರಗಳಲ್ಲಿರುವ ಮಂಟಪಗಳು ಈಕಾಲದವುಗಳೇ.

ಆಂಧ್ರಪ್ರದೇಶದಲ್ಲಿಯೂ ಹಲವಾರು ಕಡೆ ಈ ಶೈಲಿಯಲ್ಲಿ ಈ ಅರಸರು ಅವರ ಅಧೀನ ಅಧಿಕಾರಿಗಳು ಕಟ್ಟಿಸಿದ ಕಟ್ಟಡಗಳಿವೆ. ತಾಡಪತ್ರಿಯಲ್ಲಿರುವ, ಈಗ ಜೀರ್ಣಾವಸ್ಥೆಯಲ್ಲಿರುವ ಚಿಂತಲರಾಯ ಎಂಬ ಗುಡಿಯ ಗೋಪುರಗಳು ಹಂಪೆಯ ವಿಠ್ಠಲಸ್ವಾಮಿಯ ಗೋಪುರಗಳಿಗಿಂತ ಹೆಚ್ಚು ಭವ್ಯವಾಗಿವೆ. ಈ ಕಾಲದ ಶಿಲ್ಪಶೈಲಿಗ ಈ ದೇವಾಲಯದಲ್ಲಿ ಕಾಣುವುದು ಒಂದು ಅಮೂಲ್ಯ ವಾದ ಭಂಡಾರವನ್ನು. ಸ್ವಲ್ಪ ಹಸಿರು ಛಾಯೆಯ ಶಿಲೆಗಳಲ್ಲಿ ಕೆತ್ತಲಾದ ಇಲ್ಲಿನ ಶಿಲ್ಪಗಳು ಕಲ್ಯಾಣ ಚಾಲುಕ್ಯರ ಶಿಲ್ಪಶೈಲಿಯನ್ನು ಹೋಲುತ್ತದೆಯಾದರೂ, ಇಲ್ಲಿ ಅದು ಹೆಚ್ಚು ವಿಕಾಸಗೊಂಡಿದೆ. ದಕ್ಷಿಣ ಭಾರತದಲ್ಲೆಲ್ಲಾ ಹಬ್ಬಿದ ಈ ಸಾಮ್ರಾಜ್ಯ ಸಹಜವಾಗಿಯೇ ಅಲ್ಲಿ ಆ ವರೆಗೂ ಇದ್ದ ಭಿನ್ನವಾದ–ಚಾಲುಕ್ಯ, ಚೋಳ ಸಂಪ್ರದಾಯಗಳನ್ನು ಅಳವಡಿಸಿಕೊಂಡ ವಿಶಿಷ್ಟವಾದ ವಿನೂತನ ಶೈಲಿಯೊಂದನ್ನು ಕಂಡುಕೊಂಡಿತು. ತಾಡಪತ್ರಿ ದೇವಾಲಯದ ಗೋಪುರಗಳಲ್ಲಿ ಶಿಲ್ಪಗಳು ವಿಶೇಷವಾಗಿದ್ದು ಅವು ಕರಾರುವಾಕ್ಕಾಗಿ ಸೂಕ್ಷ್ಮವಾಗಿ ಸ್ಫುಟವಾಗಿ ಕಡೆಯಲ್ಪಟ್ಟಿವೆ. ಪರಿಣಾಮ–ಇತರ ಶೈಲಿಗಳಿಗಿಂತ ಹೆಚ್ಚು ಶ್ರೀಮಂತ ಉತ್ತಮ ಅಭಿರುಚಿ ಇದರಲ್ಲಿ ಕಂಡುಬರುತ್ತದೆ.



ಚಿಂತಲರಾಯಸ್ವಾಮಿ ದೇವಸ್ಥಾನ – ತಾಡಪತ್ರಿ



ಲೇಪಾಕ್ಷಿ - ಅಲಂಕಾರಿಕ ಸ್ತಂಭ



ಲೇಪಾಕ್ಷಿ – ಭಿಕ್ಷಾಟನ ಶಿವ



ಲೇಪಾಕ್ಷಿಯಲ್ಲಿ ನಂದಿ



ತಾಡಪತ್ರಿಯ ದೇವಾಲಯದಲ್ಲಿರುವ ಕಲ್ಲಿನ ರಥ

ಅಚ್ಯುತದೇವರಾಯನ ಅಧೀನದಲ್ಲಿ ಅಧಿಕಾರಿಯಾಗಿದ್ದ ವಿರೂಪಣ್ಣನು ಲೇಪಾಕ್ಷಿಯಲ್ಲಿ ಕಟ್ಟಿಸಿದ ವೀರಭದ್ರ, ರಾಮ ದೇವಾಲಯಗಳು ಈ ಶೈಲಿಯ ಇನ್ನೆರಡು ನಿದರ್ಶನಗಳು. ರಾಮ ದೇವಾಲಯದಲ್ಲಿ ನಾಟ್ಯ ಮಂಟಪವಿದೆ. ಅದರಲ್ಲಿ ಶಿವನ, ನಟರಾಜನ ಗಾಯಕವೃಂದದ ಅಪ್ಸರೆಯರ ಶಿಲ್ಪಫಲಕಗಳಿವೆ. ವೀರಭದ್ರ ಅಲಯದಲ್ಲಿರುವ ನಂದಿಯ ವಿಗ್ರಹ ಅಖಂಡ ಶಿಲೆಯಲ್ಲಿ ಕೆತ್ತಿದ ಬೃಹದ್ಗಾತ್ರದ ಭವ್ಯ ಮೂರ್ತಿ. ಇದಕ್ಕೆ ಸಾಟಿಯಾದ ಇಂತಹ ಇನ್ನೊಂದು ವಿಗ್ರಹ ಬೇರೆಲ್ಲೂ ಇಲ್ಲವೆನ್ನಬಹುದು. ತಿರುಪತಿ, ಕಾಳಹಸ್ತಿಗಳಲ್ಲೂ ದೂರದ ಸಿಂಹಾಚಲ ಮುಂತಾದ ಇತರ ಪವಿತ್ರ ಕ್ಷೇತ್ರಗಳಲ್ಲೂ ಈ ಅರಸರ ಕೊಡುಗೆ ಗಳಾದ ಶಿಲ್ಪಗಳನ್ನೂ ಮಂಟಪಗಳನ್ನೂ ಕಾಣಬಹುದು.

ಇಲ್ಲಿಗೆ ವಿಜಯನಗರದ ವಾಸ್ತುಶಿಲ್ಪಕ್ಕೆ ಸಂಬಂಧಿಸಿದ ಈ ಪಕ್ಷಿನೋಟ ಮುಗಿಯಿತು.



